# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜೂನ್ ೨೫, ೨೦೧೫ (ಆಷಾಢ ೪, ಶಕ ವರ್ಷ ೧೯೩೭)<br>Bengaluru, Thursday, June 25, 2015 (Ashadha 4, Shaka Varsha 1937) | ಸಂಚಿಕೆ ೨೬<br>Issue 26 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಿ.ಕೆ.ಶ್ರೀನಿವಾಸರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಇವರಿಗೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಉಪ ಕಾರ್ಯದರ್ಶಿ ಮತ್ತು ಜಂಟಿ ಕಾರ್ಯದರ್ಶಿ ಹುದ್ದೆಗೆ ಬಡ್ತಿ ನೀಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂ: ಸಿಆಸುಇ 104 ಎಸ್ಇಎನ್ 96, ದಿನಾಂಕ: 31–12–2004.
2. ಸರ್ಕಾರದ ಆದೇಶ ಸಂಖ್ಯೆ: 14 ಎಸ್ಇಎನ್ 2005, ದಿನಾಂಕ: 14–12–2011.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸೇಇವಿ 2011, ದಿನಾಂಕ:20–11–2012.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 18 ಸೇಇವಿ 2011, ದಿನಾಂಕ: 07–03–2013.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 125 ಸಿಎನ್ಎಸ್ 14, ದಿನಾಂಕ: 11–03–2015.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಆದೇಶದಲ್ಲಿ, ಶ್ರೀ ಬಿ.ಕೆ.ಶ್ರೀನಿವಾಸರಾವ್, ಸರ್ಕಾರದ ಅಧೀನ ಕಾರ್ಯದರ್ಶಿ(ನಿವೃತ್ತ) ಇವರು ಶಾಖಾಧಿಕಾರಿಯಾಗಿದ್ದ ಅವಧಿಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯಚ ಉಪಹಾರ ಮಂದಿರದ ವ್ಯವಸ್ಥಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 1994 ರಿಂದ 1996 ರ ಅವಧಿಯಲ್ಲಿ ಉಪಹಾರ ಮಂದಿರದ ಕಾಫಿ, ಟೀ ಮತ್ತು ತಿಂಡಿ ಪದಾರ್ಥಗಳ ಮುಂಗಡ ಪುಸ್ತಕಗಳನ್ನು ವಿತರಿಸಿದ ಬಾಬ್ತು ರೂ.3,29,000/– ಗಳ ಹಣ ದುರುಪಯೋಗಪಡಿಸಿಕೊಂಡಿರುವ ಆರೋಪಕ್ಕೆ ಸಂಬಂಧಿಸಿದಂತೆ ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿ ಇವರ ವಿರುದ್ಧದ ಆರೋಪವು ವಿಚಾರಣೆಯಿಂದ ಸಾಬೀತಾದ ಹಿನ್ನೆಲೆಯಲ್ಲಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 8(vi) ರನ್ವಯ ತಕ್ಷಣದಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲಾಗಿತ್ತು ಹಾಗೂ ಇವರಿಂದ ಸರ್ಕಾರಕ್ಕೆ ಆಗಿರುವ ನಷ್ಟದ ಮೊತ್ತವನ್ನು ವಸೂಲು ಮಾಡಲು ಸಹ ಆದೇಶಿಸಲಾಗಿತ್ತು.

ನಂತರ ಶ್ರೀ ಬಿ.ಕೆ.ಶ್ರೀನಿವಾಸರಾವ್, ಇವರು ದಿನಾಂಕ: 31–12–2004ರ ಸರ್ಕಾರದ ಆದೇಶವನ್ನು ಪ್ರಶ್ನಿಸಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ:8214/2005ನ್ನು ದಾಖಲಿಸಿರುತ್ತಾರೆ. ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿದಾರರ ಅರ್ಜಿಯ ಬಗ್ಗೆ ವಿಚಾರಣೆಯನ್ನು ನಡೆಸಿ ದಿನಾಂಕ: 25–11–2009ರ ತಮ್ಮ ತೀರ್ಪಿನಲ್ಲಿ ಸದರಿ ಅರ್ಜಿದಾರರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಹೊರಡಿಸಲಾಗಿದ್ದ ದಿನಾಂಕ: 31–12–2004ರ ಸರ್ಕಾರದ ಆದೇಶವನ್ನು ವಜಾಗೊಳಿಸಿರುತ್ತದೆ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಪಿನ ವಿರುದ್ಧ ಸರ್ಕಾರವು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂ: 5580/2010ನ್ನು ದಾಖಲಿಸಿದ್ದು, ಮಾನ್ಯ ಉಚ್ಛ ನ್ಯಾಯಾಲಯವು ರಿಟ್ ಅರ್ಜಿ ಸಂ: 5580/2010ರ ಮೇಲೆ ದಿನಾಂಕ: 17–06–2011 ರಂದು ಈ ಕೆಳಕಂಡಂತೆ ತೀರ್ಪು ನೀಡಿತು.

"In the result petition is allowed and the order passed by the Karnataka Administrative Tribunal dated: 25-11-2009 in application no. 8214/2005 is hereby modified and setting aside the order of imposing of penalty of compulsory retirement is affirmed.However, we direct the petitioner/State to conduct denovo or to continue the enquiry where it was interrupted on account of non-giving of an opportunity to the respondent. In view of this order, we are of the opinion that the petitioner would get all consequential monetory benefits subject to the result of inquiry"

ಮೇಲೆ ಓದಲಾದ (2) ರ ಆದೇಶದಲ್ಲಿ, ಸದರಿ ಅಧಿಕಾರಿಯವರನ್ನು ಕಡ್ಡಾಯ ನಿವೃತ್ತಿಗೊಳಿಸಿ ಹೊರಡಿಸಿದ್ದ ದಿನಾಂಕ: 31-12-2004ರ ಆದೇಶವನ್ನು ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪಿನನ್ವಯ ರದ್ದುಪಡಿಸಿ, ಇವರ ವಿರುದ್ಧದ ಮುಂದುವರೆದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಸದರಿ ಅಧಿಕಾರಿಯನ್ನು ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ಪುನರ್ ನೇಮಕ ಮಾಡಿ ಆದೇಶಿಸಿದೆ.

ಮಾನ್ಯ ಉಚ್ಚ ನ್ಯಾಯಾಲಯದ ತೀರ್ಪಿನನ್ವಯ ಸದರಿ ಅಧಿಕಾರಿಯವರ ವಿರುದ್ಧದ ಆರೋಪಕ್ಕೆ ಸಂಬಂಧಿಸಿದಂತೆ ಮುಂದುವರೆದ ಇಲಾಖಾ ವಿಚಾರಣೆಯನ್ನು ನಡೆಸಲು ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ದೇವೇಂದ್ರಯ್ಯ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುತ್ತದೆ. ಸದರಿ ವಿಚಾರಣಾಧಿಕಾರಿಯವರು ವಿಚಾರಣೆಯನ್ನು ನಡೆಸಿ ತಮ್ಮ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಯು ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿಯ ಹಿನ್ನೆಲೆಯಲ್ಲಿ ಮೇಲೆ ಓದಲಾದ (3)ರ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಸದರಿ ಆದೇಶದ ಹಿನ್ನೆಲೆಯಲ್ಲಿ ಮೇಲೆ ಓದಲಾದ (4) ರ ಆದೇಶದಲ್ಲಿ ಶ್ರೀ ಬಿ.ಕೆ.ಶ್ರೀನಿವಾಸರಾವ್, ಇವರನ್ನು ಕಡ್ಡಾಯ ನಿವೃತ್ತಿಗೊಳಿಸಿದ ದಿನಾಂಕ: 01-01-2005 ರಿಂದ ಅವರನ್ನು ಸೇವೆಗೆ ಮುರುಸ್ಥಾಪಿಸಿದ ದಿನಾಂಕ: 14-12-2011ರ ಅವಧಿಯನ್ನು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 99(ಎ)(1) ರ ಉಪನಿಯಮ (3)ರನ್ವಯ 'ಕರ್ತವ್ಯದ ಅವಧಿ' ಎಂದು ಪರಿಗಣಿಸಿ ಸದರಿ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ. ಅವರು ಪಡೆಯಬಹುದಾಗಿದ್ದ ಎಲ್ಲಾ ವೇತನ ಮತ್ತು ಭತ್ಯೆಗಳನ್ನು ಪಡೆಯಲು ಶ್ರೀಯುತರು ಅರ್ಹರಿರುತ್ತಾರೆಂದು ಆದೇಶಿಸಲಾಗಿರುತ್ತದೆ.

ಶ್ರೀ ಬಿ.ಕೆ.ಶ್ರೀನಿವಾಸರಾವ್, ಇವರು ತಮಗೆ ಸರ್ಕಾರದ ಉಪ ಕಾರ್ಯದರ್ಶಿ ಮತ್ತು ಸರ್ಕಾರದ ಜಂಟಿ ಕಾರ್ಯದರ್ಶಿ ವೃಂದಕ್ಕೆ ಪೂರ್ವಾನ್ವಯವಾಗಿ ಬಡ್ತಿ ನೀಡುವಂತೆ ಕೋರಿದ್ದು, ಸದರಿಯವರ ಮನವಿಯನ್ನು ಪರಿಶೀಲಿಸಿ, ಶ್ರೀ ಬಿ.ಕೆ.ಶ್ರೀನಿವಾಸರಾವ್ (ಜ್ಯೇಷ್ಠತೆ ಸಂ: 475) ರವರಿಗಿಂತ ಅಧೀನ ಕಾರ್ಯದರ್ಶಿ ವೃಂದದ ಜ್ಯೇಷ್ಠತೆಯಲ್ಲಿ ಕಿರಿಯವರಾದ ಶ್ರೀ ಕೆ.ವಿ.ಪ್ರಸಾದ್, (ಜ್ಯೇಷ್ಠತೆ ಸಂ: 476) ಇವರಿಗೆ ಉಪಕಾರ್ಯದರ್ಶಿ ಹುದ್ದೆಗೆ ದಿನಾಂಕ: 08-06-2005 ರಂದು ಬಡ್ತಿ ನೀಡಿರುವುದರಿಂದ ಹಾಗೂ ಅಧಿಕಾರಿಯವರಿಗಿಂತ ಉಪ ಕಾರ್ಯದರ್ಶಿ ವೃಂದದ ಜ್ಯೇಷ್ಠತೆಯಲ್ಲಿ ಕಿರಿಯವರಾದ ಶ್ರೀಮತಿ ಎನ್.ವಿಶಾಲಕ್ಷಮ್ಮ, (ಜ್ಯೇಷ್ಠತೆ ಸಂ: 485) ಇವರಿಗೆ ಜಂಟಿ ಕಾರ್ಯದರ್ಶಿ ಹುದ್ದೆಗೆ ದಿ: 02-04-2011ರಂದು ಬಡ್ತಿ ನೀಡಿರುವುದರಿಂದ ಶ್ರೀ ಬಿ.ಕೆ.ಶ್ರೀನಿವಾಸರಾವ್, ಇವರಿಗೆ ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿ ನಿಯಂತ್ರಣ) ನಿಯಮ 1978ರ ನಿಯಮ 2(1)(ಎ) ರನ್ವಯ ದಿನಾಂಕ: 08-06-2005 ರಿಂದ ಪೂರ್ವಾನ್ವಯವಾಗಿ ಅನ್ವಯವಾಗುವಂತೆ, ಉಪ ಕಾರ್ಯದರ್ಶಿ, ವೃಂದಕ್ಕೆ ಹಾಗೂ ದಿನಾಂಕ: 02-04-2011 ರಿಂದ ಪೂರ್ವಾನ್ವಯವಾಗಿ ಅನ್ವಯವಾಗುವಂತೆ ಜಂಟಿ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡುವ ಬಗ್ಗೆ ಕ್ರಮ ಕೈಗೊಳ್ಳಲು ಇಲಾಖಾ ಮುಂಬಡ್ತಿ ಸಮಿತಿಯು ತೀರ್ಮಾನಿಸಿ, ಸದರಿ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗದ (ಸಮಾಲೋಚನೆ) ನಿಯಮಗಳು 2000 ರ ಅನ್ವಯ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ: (5) ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಅಧಿಕಾರಿಗೆ ದಿನಾಂಕ: 08-06-2005 ರಿಂದ ಉಪ ಕಾರ್ಯದರ್ಶಿ ಹುದ್ದೆಗೆ ಮತ್ತು 02-04-2011 ರಿಂದ ಜಂಟಿ ಕಾರ್ಯದರ್ಶಿ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ಸಹಮತಿ ನೀಡಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 28 ಸಲುಸೇ 2014, ಬೆಂಗಳೂರು, ದಿನಾಂಕ: 27ನೇ ಏಪ್ರಿಲ್ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಕೆ.ಶ್ರೀನಿವಾಸರಾವ್, ನಿವೃತ್ತ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಇವರಿಗೆ ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿ ನಿಯಂತ್ರಣ) ನಿಯಮಗಳು, 1978ರ ನಿಯಮ 2(1)(ಎ)ರನ್ವಯ ಅವರಿಗಿಂತ ಅಧೀನ ಕಾರ್ಯದರ್ಶಿ ವೃಂದದ ಜ್ಯೇಷ್ಠತೆಯಲ್ಲಿ ಇವರಿಗಿಂತ ಕಿರಿಯವರಾದ ಶ್ರೀ ಕೆ.ವಿ.ಪ್ರಸಾದ್, (ಜ್ಯೇಷ್ಠತೆ ಸಂ: 476), ಇವರಿಗೆ ಉಪ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕ: 08-06-2005 ರಿಂದ ಪೂರ್ವಾನ್ವಯವಾಗಿ ಅನ್ವಯವಾಗುವಂತೆ ವೇತನ ಶ್ರೇಣಿ ರೂ.40050-1050-45300-1200-52500-1350-56550 ರ ಉಪ ಕಾರ್ಯದರ್ಶಿ ವೃಂದಕ್ಕೆ ಹಾಗೂ ಅಧಿಕಾರಿಯವರಿಗಿಂತ ಉಪ ಕಾರ್ಯದರ್ಶಿ ವೃಂದದ ಜ್ಯೇಷ್ಠತೆಯಲ್ಲಿ ಕಿರಿಯವರಾದ ಶ್ರೀಮತಿ ಎನ್.ವಿಶಾಲಕ್ಷಮ್ಮ, (ಜ್ಯೇಷ್ಠತೆ ಸಂ: 485) ಇವರಿಗೆ ಜಂಟಿ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿದ ದಿನಾಂಕ: 02-04-2011 ರಿಂದ ಪೂರ್ವಾನ್ವಯವಾಗಿ ಅನ್ವಯವಾಗುವಂತೆ ವೇತನ ಶ್ರೇಣಿ ರೂ. 48900-1200-52500-1350-60600-1500-63600 ರ ಜಂಟಿ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ(ಸೇವೆಗಳು-6)

**PR-279**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯ, ಆರ್ಥಿಕ ಇಲಾಖೆ, ಅಧೀನ ಕಾರ್ಯದರ್ಶಿ (ಸಾಂಖ್ಯಿಕ ಹಣಕಾಸು), ಹುದ್ದೆಯನ್ನು ಹಿರಿಯ ಶ್ರೇಣಿಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಇ 26 ರಾಲೆಪ 2015, ದಿನಾಂಕ: 27-02-2015.

2. ಆರ್ಥಿಕ ಇಲಾಖೆಯ ಕಡತ ಸಂಖ್ಯೆ:ಆಇ 26 ರಾಲೆಪ 2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಅಧಿಸೂಚನೆಯಲ್ಲಿ ಶ್ರೀ ವಿ.ಡಿ.ನಿಶ್ಚಿತ್, ಅಧೀನ ಕಾರ್ಯದರ್ಶಿ(ಸಾಂಖ್ಯಿಕ ಹಣಕಾಸು), ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಇಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಇವರಿಗೆ ಸಹಾಯಕ ನಿಯಂತ್ರಕರ ಹುದ್ದೆಯಿಂದ ಉಪ ನಿಯಂತ್ರಕರ ಹುದ್ದೆಗೆ ವೇತನ ಶ್ರೇಣಿ ರೂ.36.300-53,850 ರಲ್ಲಿ ಮುಂಬಡ್ತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ(2)ರಲ್ಲಿ ಆಯವ್ಯಯಕ್ಕೆ ಸಂಬಂಧಿಸಿದಂತೆ ಪೂರ್ವಭಾವಿ ಹಾಗೂ ತದನಂತರ ಕೆಲಸ, ನಿರ್ವಹಣೆ, ವಿತ್ತೀಯ ಸುಧಾರಣೆ, debt profile, ಮಾರುಕಟ್ಟೆ ಸಾಲ, ಭಾರತೀಯ ರಿಜರ್ವ್ ಬ್ಯಾಂಕ್ ವಿಷಯ ಮತ್ತು ಸಾಂಸ್ಥಿಕ ಹಣಕಾಸು ಮತ್ತು ಸಂಬಂಧಪಟ್ಟ ಎಲ್ಲಾ ಅಂಕಿಅಂಶಗಳ ಕ್ರೋಢೀಕರಣ ಮತ್ತು ಗಣಕ ಯಂತ್ರದಲ್ಲಿ ಪೋಷಿಸಿ, ನಿರ್ವಹಿಸುತ್ತಿರುವ ಶ್ರೀ ವಿ.ಡಿ.ನಿಶ್ಚಿತ್, ಅಧೀನ ಕಾರ್ಯದರ್ಶಿ ಇವರ ಸೇವೆಯನ್ನು ಆರ್ಥಿಕ ಇಲಾಖೆಯಲ್ಲಿಯೇ ಮುಂದುವರೆಸುವ ಅವಶ್ಯಕತೆ ಇರುವುದರಿಂದ ಹಾಗೂ ಆಡಳಿತದ ಹಿತದೃಷ್ಟಿಯಿಂದ ಸದರಿ ಹುದ್ದೆಯನ್ನು ಉನ್ನತೀಕರಿಸುವಂತೆ ಆರ್ಥಿಕ ಇಲಾಖೆಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 95 ಸಉಸೇ 2015, ಬೆಂಗಳೂರು ದಿನಾಂಕ: 10ನೇ ಏಪ್ರಿಲ್, 2015,**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿ (ಸಾಂಸ್ಥಿಕ ಹಣಕಾಸು) ಹುದ್ದೆಯನ್ನು ನಿಲಂಬನೆಯಲ್ಲಿರಿಸಿ ವಿಶೇಷಾಧಿಕಾರಿ ಹುದ್ದೆಯನ್ನು ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಸೃಜಿಸಿ ಆದೇಶಿಸಿದೆ ಹಾಗೂ ಶ್ರೀ ವಿ.ಡಿ.ನಿಶ್ಚಿತ್, ಅಧೀನ ಕಾರ್ಯದರ್ಶಿ(ಸಾಂಸ್ಥಿಕ ಹಣಕಾಸು)(ನಿಯೋಜನೆ), ಆರ್ಥಿಕ ಇಲಾಖೆ, ಇವರನ್ನು ವಿಶೇಷಾಧಿಕಾರಿ ಹುದ್ದೆಯಲ್ಲಿ ದಿನಾಂಕ: 27–02–2015ರಿಂದ ಪೂರ್ವಾನ್ವಯವಾಗುವಂತೆ ಅವರ ಸ್ವಂತ ವೇತನ ಶ್ರೇಣಿಯಲ್ಲಿ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು–6)

**PR-280**

## ಇಂಧನ ಸಚಿವಾಲಯ

**ವಿಷಯ :** "ನ್ಯಾಷನಲ್ ಸೋಲಾರ್ ಮಿಷನ್" ಕಾರ್ಯಕ್ರಮದಡಿಯಲ್ಲಿ ಸೋಲಾರ್ ಎನರ್ಜಿ ಕಾರ್ಪೋರೇಷನ್ ಆಫ್ ಇಂಡಿಯಾ (SECI) ಮುಖಾಂತರ ಫೇಸ್–2, ಬ್ಯಾಚ್–2ರಲ್ಲಿ ರಾಜ್ಯಕ್ಕೆ ತಾತ್ವಿಕವಾಗಿ ಹಂಚಿಕೆಯಾಗಿರುವ ಸೌರ ವಿದ್ಯುತ್‌ನ್ನು ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಇಎನ್ 70 ವಿಎಸ್‌ಸಿ 2013, ದಿನಾಂಕ : 02–01–2014.
2. ಸರ್ಕಾರದ ಆದೇಶ ಸಂಖ್ಯೆ : ಇಎನ್ 45 ವಿಎಸ್‌ಸಿ 2013, ದಿನಾಂಕ : 31–03–2014.
3. ಎಂಎನ್‌ಆರ್‌ಇ ಇವರ ಪತ್ರ ಸಂಖ್ಯೆ : 32/2/2014–15/GSP(Part-I) ದಿನಾಂಕ : 19–12–2014.
4. ಸರ್ಕಾರದ ಆದೇಶ ಸಂಖ್ಯೆ : ಇಎನ್ 70 ವಿಎಸ್‌ಸಿ 2013, ದಿನಾಂಕ : 17–03–2015.
5. ಎಂಎನ್‌ಆರ್‌ಇ ರವರ ಪತ್ರ ಸಂಖ್ಯೆ : 32/2/2014–15/GSP/Part-II, ದಿನಾಂಕ : 30–03–2015.

**ಪ್ರಸ್ತಾವನೆ :**

ಕೇಂದ್ರ ಸರ್ಕಾರದ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯದಿಂದ ನ್ಯಾಷನಲ್ ಸೋಲಾರ್ ಮಿಷನ್‌ನಡಿ ಫೇಸ್–1 ನಲ್ಲಿ ರಾಷ್ಟ್ರೀಯ ಶಾಖೋತ್ಪನ್ನ ವಿದ್ಯುತ್ ನಿಗಮ ನಿಯಮಿತ (ಎನ್.ಟಿ.ಪಿ.ಸಿ.)–ವಿದ್ಯುತ್ ವ್ಯಾಪಾರ ನಿಗಮ ನಿಯಮಿತ (ವಿವಿಎನ್‌ಎಲ್) ರವರಿಂದ ಸೌರ ವಿದ್ಯುತ್‌ನ್ನು ಶಾಖೋತ್ಪನ್ನ ವಿದ್ಯುತ್‌ನೊಂದಿಗೆ ಸೇರಿಸಿ ರಾಜ್ಯಕ್ಕೆ 70 ಮೆ.ವ್ಯಾ. ಹಂಚಿಕೆ ಮಾಡಿರುತ್ತಾರೆ. ಮೇಲೆ ಓದಲಾದ (1)ರಲ್ಲಿ ಈಗಾಗಲೇ 70 ಮೆ.ವ್ಯಾ. ಸಂಯೋಜಿತ ವಿದ್ಯುತ್‌ನ್ನು ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡಲಾಗಿರುತ್ತದೆ.

ನ್ಯಾಷನಲ್ ಸೋಲಾರ್ ಮಿಷನ್ ರ ಫೇಸ್–2, ಬ್ಯಾಂಚ್–2 ಹಂತ–1 ರಲ್ಲಿ ರಾಜ್ಯಕ್ಕೆ ಸೌರ ವಿದ್ಯುತ್ ಯೋಜನೆಗಳಿಂದ 330 ಮೆ.ವ್ಯಾ. ಹಾಗೂ ನಿಯೋಜಿಸದೆ ಇರುವ ಶಾಖೋತ್ಪನ್ನ ವಿದ್ಯುತ್‌ನಿಂದ 115 ಮೆ.ವ್ಯಾ. ಅನ್ನು ಸಂಯೋಜಿಸಿ ರಾಜ್ಯಕ್ಕೆ ಹಂಚಿಕೆ ಮಾಡಿರುತ್ತಾರೆ. ಆದರಂತೆ ಸೌರ ವಿದ್ಯುತ್ ಯೋಜನೆಗಳಿಂದ 330 ಮೆ.ವ್ಯಾ. ಹಾಗೂ ನಿಯೋಜಿಸದೆ ಇರುವ ಶಾಖೋತ್ಪನ್ನ ವಿದ್ಯುತ್‌ನಿಂದ 115 ಮೆ.ವ್ಯಾ. ವಿದ್ಯುತ್ ಸಾಮರ್ಥ್ಯವನ್ನು ರಾಜ್ಯದ ವಿವಿಧ ಮೂಲಗಳಿಂದ ದೊರಕುವ ವಿದ್ಯುತ್ ಶೇಕಡವಾರು ಪ್ರಮಾಣದಲ್ಲಿ ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆಯಾಗಿರುವ ಅನುಪಾತದಲ್ಲಿ ಸಂಯೋಜಿತ ಸಾಮರ್ಥ್ಯದ ಸೌರ ವಿದ್ಯುತ್‌ನ್ನು ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳಿಗೆ ಮೇಲೆ ಓದಲಾದ (4)ರ ಆದೇಶದಂತೆ ಹಂಚಿಲಾಗಿರುತ್ತದೆ.

ಪ್ರಸ್ತುತ, ಮೇಲೆ ಓದಲಾದ (5)ರಂತೆ ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF Scheme ಕಾರ್ಯಕ್ರಮದಲ್ಲಿ SECI ಯಿಂದ 500 ಮೆ.ವ್ಯಾ. ಸೌರ ವಿದ್ಯುತ್ತನ್ನು ರಾಜ್ಯಕ್ಕೆ ಹಂಚಿಕೆ ಮಾಡುವ ಕುರಿತು ತಾತ್ವಿಕ ಅನುಮೋದನೆ ನೀಡಿರುವುದಾಗಿ ಕೇಂದ್ರ ಸರ್ಕಾರದ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯ ರವರು ತಿಳಿಸಿರುತ್ತಾರೆ. ಮೇಲೆ ಓದಲಾದ (3)ರಲ್ಲಿ ಕೇಂದ್ರ ಸರ್ಕಾರದ ನವ ಮತ್ತು ನವೀಕರಿಸಬಹುದಾದ ಇಂಧನ ಮಂತ್ರಾಲಯರವರು ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3 State Specific VGF Scheme ಕಾರ್ಯಕ್ರಮದಲ್ಲಿ ವಿದ್ಯುತ್ ವಿತರಣಾ ಕಂಪನಿಗಳೊಂದಿಗೆ 25 ವರ್ಷಕ್ಕೆ ಮಾರಾಟ ಒಪ್ಪಂದವನ್ನು ಮಾಡಿಕೊಂಡು ವಿದ್ಯುತ್ ನೀಡಲಾಗುವುದು ಹಾಗೂ ವಿದ್ಯುತ್ ದರವು ಮೊದಲನೇ ವರ್ಷಕ್ಕೆ ರೂ. 5.50 ಪ್ರತಿ ಯೂನಿಟ್‌ಗೆ ನಂತರ ಪ್ರತಿ ವರ್ಷ ರೂ. 0.05 ಹೆಚ್ಚುತ್ತಾ 21ನೇ ವರ್ಷಕ್ಕೆ ರೂ. 6.50 ಪ್ರತಿ ಯೂನಿಟ್‌ಗೆ ಆಗುತ್ತದೆ. 25 ವರ್ಷದವರೆಗೂ ಇದೇ ವಿದ್ಯುತ್ ದರ ಮುಂದುವರೆಯುವುದಾಗಿ ತಿಳಿಸಿರುತ್ತಾರೆ. ಈ ವಿದ್ಯುತ್ ಸಾಮರ್ಥ್ಯವನ್ನು ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಮರು ಹಂಚಿಕೆ ಮಾಡುವ ಅವಶ್ಯಕತೆ ಇರುವುದರಿಂದ ಹಾಗೂ ವಿದ್ಯುತ್ ವಿತರಣಾ ಕಂಪನಿಗಳೂ SECI ರವರೊಂದಿಗೆ ಮುಂದಿನ ಕ್ರಮವಹಿಸಲು ಅನುವು ಮಾಡಿಕೊಡಲು ಉದ್ದೇಶಿಸಿದೆ.

ಮೇಲೆ ಓದಲಾದ (4)ರಲ್ಲಿ ಆದೇಶಿಸಿರುವಂತೆ, ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ¨ಬ್ಯಾಚ್–3, State Specific VGF Scheme ಕಾರ್ಯಕ್ರಮಕ್ಕೆ ರಾಜ್ಯದಲ್ಲಿ SECI ಯಿಂದ ಹಂಚಿಕೆಯಾಗಿರುವ 500 ಮೆ.ವ್ಯಾ. ಸೌರ ವಿದ್ಯುತ್ ಸಾಮರ್ಥ್ಯವನ್ನು ರಾಜ್ಯದ ವಿವಿಧ ಮೂಲಗಳಿಂದ ದೊರಕುವ ವಿದ್ಯುತ್ ಶೇಕಡವಾರು ಪ್ರಮಾಣದಲ್ಲಿ ರಾಜ್ಯದ ವಿದ್ಯುತ್ ವಿತರಣಾ ಕಂಪನಿಗಳಿಗೆ ಮೇಲೆ ಓದಲಾದ (2)ರಲ್ಲಿ ಹಂಚಿಕೆಯಾಗಿರುವ ಅನುಪಾತದಲ್ಲಿ, ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಲು ಉದ್ದೇಶಿಸಿ ಹಾಗೂ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 70 ವಿಎಸ್‌ಸಿ 2013, ಬೆಂಗಳೂರು, ದಿನಾಂಕ : 23–04–2015.**

ನ್ಯಾಷನಲ್ ಸೋಲಾರ್ ಮಿಷನ್ ಫೇಸ್–2, ಬ್ಯಾಚ್–3, State Specific VGF Scheme ಕಾರ್ಯಕ್ರಮದಲ್ಲಿ ರಾಜ್ಯಕ್ಕೆ ಸೋಲಾರ್ ಎನರ್ಜಿ ಕಾರ್ಪೋರೇಷನ್ ಆಫ್ ಇಂಡಿಯಾ (SECI) ಯಿಂದ ತಾತ್ವಿಕವಾಗಿ ಹಂಚಿಕೆಯಾಗಿರುವ ಸೌರ ವಿದ್ಯುತ್ ಸಾಮರ್ಥ್ಯವನ್ನು ಈ ಕೆಳಕಂಡ ಅನುಪಾತದಂತೆ ರಾಜ್ಯ ವಿದ್ಯುತ್ ವಿತರಣಾ ಕಂಪನಿಗಳಿಗೆ ಹಂಚಿಕೆ ಮಾಡಲಾಗಿದೆ.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣ | ಸೌರ ವಿದ್ಯುತ್ ಸಾಮರ್ಥ್ಯ MWP ನಲ್ಲಿ |
|---|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 48.72 | 244 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 7.92 | 40 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 19.31 | 96 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.40 | 67 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.65 | 53 |
| **ಒಟ್ಟು** | 100.00 | 500 |

**ನಿಬಂಧನೆಗಳು :**

1. ಈ ಆದೇಶವು ನ್ಯಾಷನಲ್ ಸೋಲಾರ್ ಮಿಷನ್ ರ ಫೇಸ್–2, ಬ್ಯಾಚ್–3 State Speific VGF Scheme ಕಾರ್ಯಕ್ರಮದಲ್ಲಿ ರಾಜ್ಯಕ್ಕೆ ಬರುವ ವಿದ್ಯುತ್ ದಿನಾಂಕದಿಂದ ಹಾಗೂ ಮುಂದಿನ ಆದೇಶದವರೆಗೂ ಜಾರಿಯಲ್ಲಿರುತ್ತದೆ.
2. ಈ ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವು ಕೇಂದ್ರ ಸರ್ಕಾರ/SECI ಯಿಂದ ಬರುವ ವಿದ್ಯುತ್ ಪ್ರಮಾಣಕ್ಕೆ ಮಾತ್ರ ಅನ್ವಯಿಸುತ್ತದೆ.
3. ವಿದ್ಯುತ್ ವಿತರಣಾ ಕಂಪನಿಗಳು SECI ರವರೊಂದಿಗೆ ವಿದ್ಯುತ್ ಖರೀದಿ ಒಪ್ಪಂದ ಮಾಡಿಕೊಳ್ಳುವುದು.
4. ಈ ಶೇಕಡಾವಾರು ಹಂಚಿಕೆ ಪ್ರಮಾಣವನ್ನು ಅನುಸರಿಸಿ SECIನ ಸೌರ ವಿದ್ಯುತ್ ಯೋಜನೆಗಳಿಂದ ಬರುವ ವಿದ್ಯುತ್ ಪ್ರಮಾಣಕ್ಕೆ SECIರವರ ನಿಬಂಧನೆಗಳನ್ನು ಪಾಲಿಸುವುದು.
5. ಈ ಆದೇಶದಂತೆ ವಿತರಣಾ ಕಂಪನಿವಾರು ಹಂಚಿಕೆ ಮಾಡಲಾದ ವಿದ್ಯುತ್ ಪ್ರಮಾಣವನ್ನು ತಪ್ಪದೇ ಪಾಲಿಸುವುದು ಮತ್ತು ಈ ಹಂಚಿಕೆಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.
6. ಈ ಆದೇಶದ ನಿಬಂಧನೆಗಳನ್ನು ಮಾರ್ಪಡಿಸುವ ಅಧಿಕಾರ ಸರ್ಕಾರ ಹೊಂದಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 281**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** ಸಮಾಪನೆಗೊಂಡಿರುವ ದಿ ಮೈಸೂರು ಕಾಫಿ ಸಂಸ್ಕರಣ ಸಹಕಾರ ಸಂಘ ನಿ., ಮೈಸೂರು ಇದರ ಆವರಣದಲ್ಲಿ ಆಡಳಿತ ಕಛೇರಿ ಕಟ್ಟಡ ಹಾಗೂ ಸಹಕಾರ ಅಕಾಡೆಮಿ ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರಗಳ ಸಂಖ್ಯೆ : ಸಸಂನಿ/ಸಮಾಪನೆ/21/2002–03, ದಿನಾಂಕ : 27–11–2014, 23–01–2015, 18–02–2015 ಹಾಗೂ 04–03–2015.

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರಗಳಲ್ಲಿ ಸಮಾಪನೆಗೊಂಡಿರುವ ದಿ. ಮೈಸೂರು ಕಾಫಿ ಸಂಸ್ಕರಣಾ ಸಹಕಾರ ಸಂಘದ ಜಾಗೆಯಲ್ಲಿ 1 ಎಕರೆ 13 ಗುಂಟೆ ಜಾಗವನ್ನು ಈಗಾಗಲೇ ನಿಬಂಧಕರ ಹೆಸರಿಗೆ ನೋಂದಣಿ ಮಾಡಿಕೊಂಡಿರುವುದಾಗಿ, ಸರ್ಕಾರಕ್ಕೆ ನೋಂದಣಿಯಾಗಿರುವ ಈ ಜಾಗದಲ್ಲಿ ಸಹಕಾರ ಇಲಾಖೆಯ ಆಡಳಿತ ಕಛೇರಿ ಕಟ್ಟಡ ನಿರ್ಮಾಣಕ್ಕೆ ಅಂದಾಜು ರೂ. 2.48 ಕೋಟಿ ವೆಚ್ಚವಾಗಲಿದ್ದು ಅದನ್ನು ಸಂಘದಲ್ಲಿ ಲಭ್ಯವಿರುವ ನಿಶ್ಚಿತ ಠೇವಣಿಯನ್ನು ಉಪಯೋಗಿಸಿಕೊಂಡು ಮೊದಲ ಹಂತದಲ್ಲಿ ಕಾಮಗಾರಿ ಕೈಗೊಳ್ಳಲಾಗುವುದು. ಹಾಗೂ ಸಹಕಾರ ಅಕಾಡೆಮಿ ಸ್ಥಾಪಿಸುವುದಕ್ಕೆ ಅಂದಾಜು ರೂ. 4.75 ಕೋಟಿ ವೆಚ್ಚವಾಗಲಿದ್ದು ಅದನ್ನು ಸಂಘದ ಹೆಸರಿನಲ್ಲಿರುವ 7 ಎಕರೆ 22 ಗುಂಟೆಗಳ ಪೈಕಿ 5 ಎಕರೆ ಜಮೀನನ್ನು ಮಾರಾಟ ಮಾಡಿ ಬಂದ ಹಣವನ್ನು ಉಪಯೋಗಿಸಿಕೊಂಡು ಉಳಿದ 2 ಎಕರೆ 22 ಗುಂಟೆ ವಿಸ್ತೀರ್ಣದಲ್ಲಿ ಸಹಕಾರ ಅಕಾಡೆಮಿ ಸ್ಥಾಪಿಸಲಾಗುವುದೆಂದು ಇದರಿಂದ ಸರ್ಕಾರಕ್ಕೆ ಯಾವುದೇ ಹೆಚ್ಚುವರಿ ಆರ್ಥಿಕ ಹೊರ ಉಂಟಾಗುವುದಿಲ್ಲವೆಂದು ತಿಳಿಸಿ, ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸಹಕಾರ ಸಂಘಗಳ ನಿಬಂಧಕರು ಸರ್ಕಾರಕ್ಕೆ ಪ್ರಸ್ತಾವ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 23 ಸಂಮಾಸ 2015, ಬೆಂಗಳೂರು, ದಿನಾಂಕ : 08–04–2015.**

ಪ್ರಸ್ತಾವನೆಯನ್ನು ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಮಾಪನೆಗೊಂಡಿರುವ ದಿ ಮೈಸೂರು ಕಾಫಿ ಸಂಸ್ಕರಣಾ ಸಹಕಾರ ಸಂಘ ನಿ., ಮೈಸೂರು ಇದರ ಆವರಣದಲ್ಲಿ ಸರ್ಕಾರಕ್ಕೆ ನೋಂದಣಿಯಾಗಿರುವ 1 ಎಕರೆ 13 ಗುಂಟೆಯಲ್ಲಿ ಸಹಕಾರ ಇಲಾಖೆ ಆಡಳಿತ ಕಛೇರಿ ಮತ್ತು ಸಮಾಪನಾ ಸಹಕಾರ ಸಂಘದ 2 ಎಕರೆ 22 ಗುಂಟೆ ಜಮೀನಿನಲ್ಲಿ ಸಹಕಾರ ಅಕಾಡೆಮಿ ಸ್ಥಾಪಿಸಲು ಪಾರದರ್ಶಕ, ಮುಕ್ತ ಮತ್ತು ಸ್ಪರ್ಧಾತ್ಮಕ ರೀತಿಯಲ್ಲಿ ಜಮೀನನ್ನು ಮಾರಾಟ ಮಾಡಿ, ಪಾರದರ್ಶಕ ಕಾಯ್ದೆ ಮತ್ತು ಚಾಲ್ತಿಯಲ್ಲಿರುವ ನಿಯಮಗಳಿಗನುಸಾರ ಸಹಕಾರ ಸಂಘಗಳ ನಿಬಂಧಕರು ಕೈಗೊಳ್ಳುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 128 ವೆಚ್ಚ–2/2015, ದಿನಾಂಕ : 18–03–2015ರಲ್ಲಿ ನೀಡಿರುವ ಸಹಮತಿ ಹಾಗೂ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ಮೊದಲನೇ ಅನುಸೂಚಿ ನಿಯಮ 15ರ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R. 282**

**SC-50**

## COMMERCE AND INDUSTRIES SECRETARIAT

### CORRIGENDUM

### No. CI 264 SPI 2009 Bengaluru, dated 27th April 2015

**SUB :** Project Proposal of M/s NMDC Ltd.,- to establish "5 MTPA Integrated Steel Plant (2 MTPA in the 1st Phase & 3 MTPA in 2nd Phase)" at Bellary, Hospet and Sandur Taluk, Bellary District-Reg.

**REF:** Government Order No. CI 264 SPI 2009, dated : 10-12-2014.

With reference to Government Order No. CI 264 SPI 2009, dated : 10-12-2014 in the Read portion Sl. No. 2, Preamble portion and Government Order portion in place of Government Order NO. "CI 301 SPI 2011, dated : 01-10-2011" please read as Government Order No. "CI 264 SPI 2009, dated : 30-10-2009".

By Order and in the name of the Governor of Karnataka,

**S. UMADEVI**

Desk Officer (Technical Cell)
Commerce & Industries Department.

**P.R. 283**

**SC-10**

## FINANCE SECRETARIAT

**SUB :** Revision-of-the -rates of Dearness Allowance-reg.

**READ :**
(1) G.O. No. FD 23 SRP 2011,.dated: 15.06.2011
(2) G:O. No. FD 07SRP 2012, dated: 21.04.2012
(3) G.O. No. FD 17 SRP 2012, dated: 14.05.2012
(4) D.O. No. FD 2S SRP 2012, dated: 17.10.2012
(5) G.O. No. FD 09 SRP 2013, dated: 08.05.2013
(6) G.O. No. FD 21 SRP2013, dated: 03.10.2013
(7) G.O. No. FD 5 SRP 2014, dated: 08-04-2014
(8) G.0. No.FD 17 SRP W14 dated: 26.09.2014.
(9) Representation dated: 10.04.2015 of the President, Kamataka State Government Employees ' Association.

**GOVERNMENT ORDER NO. FD 11 SRP 2015, BENGALURU, DATED 24TH APRIL 2015.**

Government are pleased to sanction increase in the rates of Dearness Allowance payable to the State Government Employees in the Revised Pay Scales 2012 from the existing 25.25% to 28.75% of Basic Pay with effect from 1st January 2015.

2. These orders will apply to the full time Government Employees, Employees of Zilla Panchayats Work Charged Employees on regular time scales of pay, full time Employees of Aided Educational Institutions and Universities who are on regular time scales of pay.

3. For the purpose of grant of Dearness Allowance, the term 'Basic Pay' means, pay drawn by a Government Employee in the scale of pay applicable to the post held by him and includes:

a. Stagnation increment, if any, granted to him above the maximum of the scale of pay.

b. Personal Pay, if any, granted to him under sub-rule (3) of Rule 7 of the Karnataka Civil Services (Revised Pay) Rules, 2012.

c. Additional increment, if any, granted to him above the maximum of the scale of pay.

4. Basic Pay shall not include any emoluments other than those specified above.

5. .Government are also pleased to sanction increase in the rates of Dearness Allowance from the existing 25.25% to 28.75% of the Basic Pension/Family Pension with effect from 1st January 2015 to the State Government Pensioners/Family Pensioners and Pensioners/Family Pensioners. or the Aided Educational Institutions whose Pension/Family Pension is paid out of the Consolidated Fund of the State.

6. Government are also pleased to sanction increase in the rates of Dearness Allowance from the existing 25.25% to 28.75% of the Basic Pension/Family Pension with effect from 1 st January 2015 to the Pensioners/Family Pensioners who were drawing' pay in the UGC/AICTE/ICAR scales of pay.

7. Separate orders will be issued in respect of Employees on UGC/AICTE/ICAR/NJPC scales of pay and also in respect of NJPC Pensioners.

8. The increase in Dearness Allowance admissible under this order is payable in cash.

9. The payment on account of Dearness Allowance involving fractions of 50 paise and above shall be rounded off to the next rupee and fractions less than50 paise shall be ignored.

10. The Dearness Allowance will be shown as a distinct element of remuneration and will not be treated as pay tor any purpose.

By Order and in the name of the Governor of Karnataka,
**K.S. RAJALAKSHMI**
Under Secretary to Government,
Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ :** ತುಟ್ಟಿಭತ್ಯೆಯ ದರಗಳ ಪರಿಷ್ಕರಣೆ.

**ಓದಲಾಗಿದೆ :**
1. ಸ.ಅ. ಸಂಖ್ಯೆ : ಎಫ್‌ಡಿ 23 ಎಸ್‌ಆರ್‌ಪಿ 2011, ದಿನಾಂಕ : 15-06-2011.
2. ಸ.ಅ. ಸಂಖ್ಯೆ : ಎಫ್‌ಡಿ 07 ಎಸ್‌ಆರ್‌ಪಿ 2012, ದಿನಾಂಕ : 21-04-2012.
3. ಸ.ಅ. ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2012, ದಿನಾಂಕ : 14-05-2012.
4. ಸ.ಅ. ಸಂಖ್ಯೆ : ಎಫ್‌ಡಿ 25 ಎಸ್‌ಆರ್‌ಪಿ 2012, ದಿನಾಂಕ : 17-10-2012.
5. ಸ.ಅ. ಸಂಖ್ಯೆ : ಎಫ್‌ಡಿ 09 ಎಸ್‌ಆರ್‌ಪಿ 2013, ದಿನಾಂಕ : 08-05-2013.
6. ಸ.ಅ. ಸಂಖ್ಯೆ : ಎಫ್‌ಡಿ 21 ಎಸ್‌ಆರ್‌ಪಿ 2013, ದಿನಾಂಕ : 03-10-2013.
7. ಸ.ಅ. ಸಂಖ್ಯೆ : ಎಫ್‌ಡಿ 5 ಎಸ್‌ಆರ್‌ಪಿ 2014, ದಿನಾಂಕ : 08-04-2014.
8. ಸ.ಅ. ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2014, ದಿನಾಂಕ : 26-09-2014.
9. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ಪತ್ರ ದಿನಾಂಕ : 10-04-2015.

**ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 11 ಎಸ್‌ಆರ್‌ಪಿ 2015, ಬೆಂಗಳೂರು, ದಿನಾಂಕ : 24ನೇ ಏಪ್ರಿಲ್ 2015.**

ರಾಜ್ಯ ಸರ್ಕಾರಿ ನೌಕರರುಗಳಿಗೆ 2012ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ 1ನೇ ಜನವರಿ 2015 ರಿಂದ ಜಾರಿಗೆ ಬರುವಂತೆ ತುಟ್ಟಿಭತ್ಯೆಯ ದರವನ್ನು ಮೂಲ ವೇತನ ಶೇಕಡ 25.25 ರಿಂದ ಶೇಕಡ 28.75 ಗೆ ಹೆಚ್ಚಿಸಿ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಸರ್ಕಾರದ ಮತ್ತು ಜಿಲ್ಲಾ ಪಂಚಾಯತ್‌ಗಳ ಪೂರ್ಣಾವಧಿ ನೌಕರರಿಗೆ, ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ವರ್ಕ್‌ಚಾರ್ಜ್ ನೌಕರರಿಗೆ ಹಾಗೂ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಾಲಿಕ ವೇತನ ಶ್ರೇಣಿಗಳಲ್ಲಿರುವ ಪೂರ್ಣಾವಧಿ ನೌಕರರುಗಳಿಗೆ ಈ ಆದೇಶ ಅನ್ವಯಿಸುತ್ತದೆ.

3. ತುಟ್ಟಿಭತ್ಯೆಯ ಉದ್ದೇಶಕ್ಕಾಗಿ "ಮೂಲ ವೇತನ" ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುತ್ತಿರುವ ವೇತನ ಮತ್ತು ಅದರಲ್ಲಿ,

(ಅ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಸ್ಥಗಿತ ವೇತನ ಬಡ್ತಿಯನ್ನು ನೀಡಲಾಗಿದ್ದರೆ, ಆ ಸ್ಥಗಿತ ವೇತನ ಬಡ್ತಿ.

(ಆ) 2012ರ ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳ 7ನೇ ನಿಯಮದ (3)ನೇ ಉಪನಿಯಮದ ಮೇರೆಗೆ ಅವನಿಗೆ ನೀಡಲಾದ ವೈಯುಕ್ತಿಕ ವೇತನ ಯಾವುದಾದರೂ ಇದ್ದರೆ, ಆ ವೈಯಕ್ತಿಕ ವೇತನ,

(ಇ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಮಂಜೂರು ಮಾಡಲಾಗಿರುವ ಹೆಚ್ಚುವರಿ ವೇತನ ಬಡ್ತಿ ಯಾವುದಾದರೂ ಇದ್ದಲ್ಲಿ, ಅವುಗಳ ಸೇರುತ್ತವೆ.

4. ಮೂಲ ವೇತನಕ್ಕೆ ಮೇಲೆ ಸೂಚಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

5. ರಾಜ್ಯ ಸರ್ಕಾರದ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಮತ್ತು ರಾಜ್ಯದ ಸಂಚಿತ ನಿಧಿಯಿಂದ ನಿವೃತ್ತಿ ವೇತನ ಮತ್ತು ಕುಟುಂಬ ನಿವೃತ್ತಿ ವೇತನವನ್ನು ಪಡೆಯುತ್ತಿರುವಂತಹ ಅನುದಾನಿತ ಶಿಕ್ಷಣ ಸಂಸ್ಥೆಗಳ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 25.25 ರಿಂದ ಶೇಕಡ 28.75 ಕ್ಕೆ ಹೆಚ್ಚಿಸಿ ದಿನಾಂಕ : 1ನೇ ಜನವರಿ 2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

6. ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿದ್ದ ಪಿಂಚಣಿದಾರರು/ಕುಟುಂಬ ಪಿಂಚಣೀದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇಕಡ 25.25 ರಿಂದ ಶೇಕಡ 28.75 ಕ್ಕೆ ಹೆಚ್ಚಿಸಿ ದಿನಾಂಕ : 1ನೇ ಜನವರಿ 2015 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

7. ಯುಜಿಸಿ/ಎಐಸಿಟಿಇ/ಐಸಿಎಆರ್/ಎನ್‌ಜೆಪಿಸಿ ವೇತನ ಪಡೆಯುತ್ತಿರುವ ನೌಕರರಿಗೆ ಮತ್ತು ಎನ್‌ಜೆಪಿಸಿ ಪಿಂಚಣಿದಾರರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಆದೇಶಗಳನ್ನು ಹೊರಡಿಸಲಾಗುವುದು.

8. ಈ ಆದೇಶದ ಮೇರೆಗೆ ಲಭ್ಯವಿರುವ ತುಟ್ಟಿಭತ್ಯೆಯನ್ನು ನಗದಾಗಿ ಪಾವತಿ ಮಾಡಲಾಗುವುದು.

9. ತುಟ್ಟಿಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

10. ತುಟ್ಟಿಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ರಾಜಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2).

**P.R. 284**
**SC-500**

## ಆರ್ಥಿಕ ಸಚಿವಾಲಯ

**ಸೇರ್ಪಡೆ**

**ಸಂ. ಆಇ 12 ಎಸ್‌ಆರ್‌ಪಿ 2012 (IX), ಬೆಂಗಳೂರು, ದಿನಾಂಕ : 24–04–2015.**

ದಿನಾಂಕ : 14–06–2012ರ ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2012 (IX)ರ ಕ್ರಮ ಸಂಖ್ಯೆ 16ರ ಉಪ ಶೀರ್ಷಿಕೆ Forest Department-Staff of the Forest Department Posted for (a) Working plans, Dvelopment, Survey and Demarcation of Forest ನಂತರ ಈ ಕೆಳಗಿನ ನಮೂದನ್ನು (b) ಎಂದು ಸೇರಿಸಿಕೊಳ್ಳತಕ್ಕದ್ದು.

| Sl. No. | Category of Post | Rate of Special Allowance (Rs. per month) |
|---|---|---|
| 16 | **(b) Front Line Staff of the Wild Life Division** | |
| | (i) Range Forest Officer | 500 |
| | (ii) Deputy Range Forest Officer | 450 |
| | (iii) Forest Guard | 350 |
| | (iv) Group-D employees | 300 |

ಈ ಆದೇಶವು ತಕ್ಷಣದಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ರಾಜಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2).

**P.R. 285**
**SC-300**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಡಿ. ಕನಕರಾಜು, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ–ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 120 ರಾಲೆಪ 2015, ಬೆಂಗಳೂರು, ದಿನಾಂಕ : 20–04–2015.**

ಶ್ರೀ ಡಿ. ಕನಕರಾಜು, ಜಂಟಿ ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಪ್ರಸ್ತುತ ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಬೆಂಗಳೂರು ಇವರನ್ನು ಪಾಲಿಕೆಯಲ್ಲಿನ ಹಣಕಾಸು ಅವ್ಯವಹಾರಕ್ಕೆ ಸಂಬಂಧಪಟ್ಟಂತೆ ಕರ್ನಾಟಕ ಲೋಕಾಯುಕ್ತ ಮೊ.ಸಂ. 21/2015, ಕಲಂ 7, 13(1)(ಎ) ಸಹಿತ 13(2) ಪಿ.ಸಿ. ಆಕ್ಟ್–1988 ಪ್ರಕರಣದಲ್ಲಿ ದಿನಾಂಕ : 7–4–2015ರಂದು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದ್ದು, ಅವರು 48 ಘಂಟೆಗಳಿಗೂ ಹೆಚ್ಚಿನ ಅವಧಿಗೆ ನ್ಯಾಯಾಂಗ ಬಂಧನದಲ್ಲಿರುವುದು ಕಂಡುಬಂದಿರುವುದರಿಂದಲೂ,

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿನ ಎಲ್.ಓ.ಸಿ. ಬಿಡುಗಡೆಯಲ್ಲಿ ತೀವ್ರ ಅಕ್ರಮ ಎಸಗಿದ್ದಕ್ಕಾಗಿ ಡಿ. ಶ್ರೀ ಕನಕರಾಜು, ಅವರ ವಿರುದ್ಧ ಲೋಕಾಯುಕ್ತ ಪೋಲಿಸರಿಂದ ತನಿಖೆ ನಡೆಯುತ್ತಿರುವುದರಿಂದಲೂ,

ಲೋಕಾಯುಕ್ತ ತನಿಖೆಯನ್ನು ಕಾಯ್ದಿಟ್ಟು ಶ್ರೀ ಡಿ. ಕನಕರಾಜು ಅವರನ್ನು ದಿನಾಂಕ:7–4–2015ರಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತಿನಲ್ಲಿಡುವುದು ಅವಶ್ಯಕವೆಂದು ಕಂಡುಬಂದಿರುವುದರಿಂದಲೂ,

ಆದ್ದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(2)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಡಿ. ಕನಕರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆಯನ್ನು ಕಾದಿಟ್ಟು ಅವರನ್ನು ದಿನಾಂಕ : 7–4–2015 ರಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಡಿ. ಕನಕರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಅವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಡಿ. ಕನಕರಾಜು ಅವರ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಶ್ರೀ ಡಿ. ಕನಕರಾಜು ಅವರು ಹೊಂದಿದ್ದ ಬೃಹತ್ ಬೆಂಗಳೂರ ಮಹಾನಗರ ಪಾಲಿಕೆಯಲ್ಲಿನ ಮುಖ್ಯ ಲೆಕ್ಕಾಧಿಕಾರಿ ಹುದ್ದೆಗೆ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆ ಮಾಡಲು ನಿಯಂತ್ರಕರು, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆ ಇವರು ಕ್ರಮ ತೆಗೆದುಕೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎನ್. ಲಕ್ಷ್ಮಣ

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

P.R. 288

## ಕಂದಾಯ ಸಚಿವಾಲಯ

**ವಿಷಯ :** ಆಯುಕ್ತರು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಹಾಗೂ ಭೂಸ್ವಾಧೀನ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ, ಮತ್ತು ವಿಶೇಷ ಜಿಲ್ಲಾಧಿಕಾರಿ, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ ಇವರುಗಳಿಗೆ "ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ, 2013" ರ ಅಡಿಯಲ್ಲಿ ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:** 1) ಹೊಸ ಭೂಸ್ವಾಧೀನ ಕಾಯ್ದೆ "ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ, 2013.

2) ವಿಶೇಷ ಜಿಲ್ಲಾಧಿಕಾರಿ ಇವರ ಪತ್ರ ಸಂಖ್ಯೆ: (ಭೂಸ್ವಾಧೀನ, ಪು&ಪು), ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ ಇವರ ಪತ್ರ ಸಂಖ್ಯೆ: ಭೂಸ್ವಾ/ವಿಜಿಬೆ/ ಆಡಳಿತ/ವಿನಿದಿ–117/13–14 ದಿನಾಂಕ: 11–11–2014

3) ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 16–12–2014 ರಂದು ಜರುಗಿದ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

"ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ, 2013" ನ್ನು ದಿನಾಂಕ: 01–01–2014 ರಿಂದ ಜಾರಿಗೆ ಬಂದಿದ್ದು, ಅದರಲ್ಲಿ ಅಧಿಸೂಚನೆಗಳನ್ನು ಹೊರಡಿಸಲು ಮತ್ತು ಪುನರ್ವಸತಿಗಾಗಿ ಜಮೀನು ಭೂಸ್ವಾಧೀನಪಡಿಸಿಕೊಳ್ಳಲು ಈ ಕೆಳಗಿನಂತೆ ಕಾಯ್ದೆ ಕಲಂಗಳಿಗೆ ಅನುಗುಣವಾಗಿ ಅಧಿಕಾರ ನೀಡಲಾಗಿದೆ.

| ಅ. ನಂ | ಹೊಸ ಭೂಸ್ವಾಧೀನ ಕಾಯ್ದೆ ಕಲಂ | ಉದ್ದೇಶ | ಅಧಿಕಾರ ನೀಡಿರುವುದು |
|---|---|---|---|
| 1. | ಕಲಂ 11 | ಪ್ರಾರಂಭಿಕ ಅಧಿಸೂಚನೆ | ಜಿಲ್ಲಾಧಿಕಾರಿಗಳಿಗೆ |
| 2. | ಕಲಂ 19 | ಅಂತಿಮ ಅಧಿಸೂಚನೆ | ಸರ್ಕಾರಕ್ಕೆ |
| 3. | ಕಲಂ 43 | ಪುನರ್ವಸತಿ ಮತ್ತು ಪುನರ್ ನಿರ್ಮಾಣ | ಆಡಳಿತಾಧಿಕಾರಿಗಳು |
| 4. | ಕಲಂ 45 | ಯೋಜನಾ ಹಂತದ ಪುನರ್ವಸತಿ ಮತ್ತು ಪುನರ್ ನಿರ್ಮಾಣ ಮೇಲ್ವಿಚಾರಣಾ ಸಮಿತಿ. | ಜಿಲ್ಲಾಧಿಕಾರಿಗಳಿಗೆ |

ಕರ್ನಾಟಕ ನೀರಾವರಿ ನಿಗಮದ ವ್ಯಾಪ್ತಿಗೆ ಒಳಪಡುವ ನೀರಾವರಿ ಯೋಜನೆಗಳಾದ ಘಟಪ್ರಭಾ ಯೋಜನೆ, ಮಲಪ್ರಭಾ ಯೋಜನೆ, ಹರಿನಾಲಾ ಯೋಜನೆ, ಶಿಗ್ಗಾಂವಿ ಏತ ನೀರಾವರಿ ಯೋಜನೆ, ಕಳಸಾ ನಾಲಾ ಯೋಜನೆ, ಬೆಣ್ಣೆಹಳ್ಳ ಯೋಜನೆ, ಕೋಣ್ಣೂರ ಏತ ನೀರಾವರಿ ಯೋಜನೆ, ಬಳ್ಳಾರಿ ನಾಲಾ ಯೋಜನೆ, ರಾಮೇಶ್ವರ ಯೋಜನೆ, ಕಿಣೀಯೇ ಯೋಜನೆ, ದೂದಗಂಗಾ ಯೋಜನೆ ಹಾಗೂ ಮಾರ್ಕಂಡೇಯ ಯೋಜನೆಗಳಿಗೆ ಸಂಬಂಧಿಸಿದಂತೆ ಭೂಸ್ವಾಧೀನ ಕಾಯ್ದೆ 1894 ರ ಕಲಂ4(1) ರ ಅಧಿಸೂಚನೆ ಹೊರಡಿಸುವುದು ವಿಶೇಷ ಜಿಲ್ಲಾಧಿಕಾರಿಗಳಿಗೆ ಹಾಗೂ ಕಲಂ 6(1) ಅಂತಿಮ ಅಧಿಸೂಚನೆ ಮಂಜೂರಿಯ ಅಧಿಕಾರವನ್ನು ಆಯುಕ್ತರು, ಪು&ಪು, ಭೂಸ್ವಾಧೀನ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕೃ.ಮೇ.ಯೋ.,

ಬಾಗಲಕೋಟೆ ಇವರಿಗೆ ನೀಡಲಾಗಿತ್ತು. ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕೆಲಸಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿಗಳು ಇವರಿಗೆ ವಹಿಸಿ, ಇದರ ಮೇಲ್ವಿಚಾರಣೆಯನ್ನು ವಿಶೇಷ ಜಿಲ್ಲಾಧಿಕಾರಿಗಳು, (ಭೂಸ್ವಾಧೀನ ಪುನರ್ವಸತಿ ಮತ್ತು ಪುನರ್‌ನಿರ್ಮಾಣ) ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ ಇವರು ವಹಿಸಿಕೊಂಡು ಸರ್ಕಾರದ ನಿರ್ದೇಶನದಂತೆ ಈವರೆಗೆ ಕೆಲಸ ನಿರ್ವಹಿಸಲಾಗುತ್ತಿತ್ತು.

ಇದೀಗ ದಿನಾಂಕ: 01–01–2014ರಿಂದ ಜಾರಿಗೆ ತರಲಾದ ಹೊಸ ಭೂಸ್ವಾಧೀನ ಕಾಯ್ದೆ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ 2013" ರ ಕಲಂ 11, 19 ಹಾಗೂ 43 ರಂತೆ ಅಧಿಕಾರ ಚಲಾಯಿಸಲು ಅಧಿಕಾರ ನೀಡಿರುವಂತೆ ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಆರ್‌ಇಹೆಚ್ 2014 ದಿನಾಂಕ: 06–02–2014 ರಲ್ಲಿ ಆದೇಶಿಸಿರುವಂತೆ ವಿಶೇಷ

ಜಿಲ್ಲಾಧಿಕಾರಿಗಳು, (ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ) ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ ಇವರಿಗೂ ಸಹ ಈ ಕೆಳಕಂಡಂತೆ ಅಧಿಕಾರವನ್ನು ಪುನರ್ ಸ್ಥಾಪಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಕೋರಿರುತ್ತಾರೆ.

| ಅ. ನಂ | ಭೂಸ್ವಾಧೀನ ಕಾಯ್ದೆ–2013 | ಉದ್ದೇಶ | ಅಧಿಕಾರ ನೀಡಿರುವುದು |
|---|---|---|---|
| 1. | ಕಲಂ 11 | ಪ್ರಾರಂಭಿಕ ಅಧಿಸೂಚನೆ | ವಿಶೇಷ ಜಿಲ್ಲಾಧಿಕಾರಿಗಳು: ಭೂಸ್ವಾಧೀನ ಕಾಯ್ದೆ–2013 ರಂತೆ ವಿಶೇಷ ಜಿಲ್ಲಾಧಿಕಾರಿ, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್ ನಿರ್ಮಾಣ, ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ. |
| 2. | ಕಲಂ 19 | ಅಂತಿಮ ಅಧಿಸೂಚನೆ | ಆಯುಕ್ತರು, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ. |
| 3. | ಕಲಂ 43 | ಪುನರ್ವಸತಿ ಮತ್ತು ಪುನರ್ ನಿರ್ಮಾಣ | ವಿಶೇಷ ಜಿಲ್ಲಾಧಿಕಾರಿಗಳು, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ,<br>ಬೃಹತ್‌ನೀರಾವರಿ ಯೋಜನೆಗಳು, ಬೆಳಗಾವಿ. |

ಮುಂದುವರೆದು, ಉಲ್ಲೇಖ (3) ರಲ್ಲಿ ಓದಿದಂತೆ, ಮಾನ್ಯ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ನಡವಳಿಗಳ ಅನ್ವಯ, ಆಯುಕ್ತರು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಹಾಗೂ ಭೂಸ್ವಾಧೀನ, ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಇವರಿಗೆ ಹೊಸ ಭೂಸ್ವಾಧೀನ ಕಾಯ್ದೆ 2013 ರ ಕಲಂ 15, 19 ಹಾಗೂ 44 ರ ಅನ್ವಯ 'ಸಕ್ಷಮ ಪ್ರಾಧಿಕಾರ' ಎಂದು ತೀರ್ಮಾನಿಸಿ ಈ ಹಿಂದೆ ಹಂತ–1 ಮತ್ತು 2 ರಲ್ಲಿ ಆಯುಕ್ತರು, (ಪುನರ್ವಸತಿ ಮತ್ತು ಪುನರ್‌ನಿರ್ಮಾಣ) ಕೃಷ್ಣಾ ಮೇಲ್ದಂಡೆ ಯೋಜನೆ ಹಾಗೂ ಪದನಿಮಿತ್ತ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರಿಗೆ ನೀಡಿದ್ದ ಅಧಿಕಾರವನ್ನು ಹಂತ–3 ಕ್ಕೂ ಸಹ ಭೂಸ್ವಾಧೀನ ಪ್ರಕ್ರಿಯೆಯನ್ನು ಅನುಷ್ಠಾನಗೊಳಿಸುವಲ್ಲಿ ಅಧಿಕಾರ ನೀಡಲು ಅನುಮತಿಸಿ, ಸೂಕ್ತ ಆಡಳಿತಾತ್ಮಕ ಆದೇಶವನ್ನು ಕಂದಾಯ ಇಲಾಖೆಯಿಂದ ಹೊರಡಿಸುವಂತೆ ನಿರ್ದೇಶನ ನೀಡಲಾಗಿದೆ.

ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 18 ಆರ್‌ಇಹೆಚ್ 2014, ಬೆಂಗಳೂರು, ದಿನಾಂಕ: 23 ಜನವರಿ 2015**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಿನಾಂಕ: 01–01–2014ರಿಂದ ಜಾರಿಗೆ ತರಲಾದ "ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಪಾರದರ್ಶಕತೆ ಮತ್ತು ಸೂಕ್ತ ಪರಿಹಾರದ ಹಕ್ಕು, ಪುನರ್ವಸತಿ ಮತ್ತು ಪುನರ್ ನಿರ್ಮಾಣ ಕಾಯ್ದೆ, 2013" ರ ಕಲಂ 11, 15, 19, 43 ಹಾಗೂ 44 ರಂತೆ ಸಕ್ಷಮ ಪ್ರಾಧಿಕಾರದ ಅಧಿಕಾರ ಚಲಾಯಿಸಲು ಈ ಕೆಳಕಂಡಂತೆ ಅನುಮತಿ ನೀಡಿ ಆದೇಶಿಸಿದೆ.

| ಅ. ನಂ | ಭೂಸ್ವಾಧೀನ ಕಾಯ್ದೆ–2013 | ಉದ್ದೇಶ | ಅಧಿಕೃತ ಪ್ರಾಧಿಕಾರ |
|---|---|---|---|
| 1. | ಕಲಂ 11(1) | ಪ್ರಾರಂಭಿಕ ಅಧಿಸೂಚನೆಯ ಪ್ರಕಟಣೆ ಕುರಿತು | ವಿಶೇಷ ಜಿಲ್ಲಾಧಿಕಾರಿ, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಬೃಹತ್ ನೀರಾವರಿ ಯೋಜನೆಗಳು, ಬೆಳಗಾವಿ |
| 2. | ಕಲಂ 43 | ಪುನರ್ವಸತಿ ಮತ್ತು ಪುನರ್‌ನಿರ್ಮಾಣ | |
| 3. | | ಐತೀರ್ಪು ಅನುಮೋದನೆ ಕುರಿತು | |
| 4. | ಕಲಂ 15(3) | ಕಲಂ 15(2) ಅನ್ವಯ ಸಲ್ಲಿಸಿದ ಆಕ್ಷೇಪಣೆಗಳ ಮೇಲೆ ಕೈಗೊಳ್ಳುವ ತೀರ್ಮಾನ ಕುರಿತು | ಆಯುಕ್ತರು, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಕೃಷ್ಣಾ ಮೇಲ್ದಂಡೆ ಯೋಜನೆ, ಬಾಗಲಕೋಟೆ ಹಾಗೂ ಸರ್ಕಾರದ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕರ್ನಾಟಕ ಸರ್ಕಾರ. |
| 5. | ಕಲಂ 19(1) | ಅಂತಿಮ ಅಧಿಸೂಚನೆಯ ಘೋಷಣೆ ಮತ್ತು ಪುನರ್ವಸತಿ ಹಾಗೂ ಪುನರ್‌ನಿರ್ಮಾಣ ಯೋಜನೆಯ ಸಾರಾಂಶದ ಪ್ರಕಟಣೆ ನೀಡುವ ಕುರಿತು. | |
| 6. | ಕಲಂ 44 | ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಆಯುಕ್ತರವರ ಅಧಿಕಾರ ವ್ಯಾಪ್ತಿ ಕುರಿತು | |
| 7. | | ಐತೀರ್ಪು ಅನುಮೋದನೆಯ ಅಧಿಕಾರ | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್.ಹಂದಿಗೋಳ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ(ಭೂಸ್ವಾ–2 ಮತ್ತು ಪು&ಪು)

**PR-210**

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ(ರಿ), ರಾಯಚೂರು ಇವರಿಗೆ ರಾಯಚೂರು ತಾಲ್ಲೂಕಿನ ರಾಯಚೂರು ಗ್ರಾಮದ ಸ.ನಂ. 1192ರಲ್ಲಿ ಮಂಜೂರು ಮಾಡಲಾಗಿರುವ 16.30 ಎಕರೆ ಜಮೀನಿಗೆ ಬೆಲೆ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ರಾಯಚೂರು ಇವರ ಪತ್ರ ಸಂಖ್ಯೆ:ಕಂ.ಭೂಮಿ/1-2012-13/121, ದಿನಾಂಕ: 30-04-2012.

2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 17 ಎಲ್‌ಜಿಆರ್ 2012, ದಿ: 22-12-2012

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಂತೆ ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಸರ್ಕಾರದ ಆದೇಶದಲ್ಲಿ ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕಿನ ರಾಯಚೂರು ಗ್ರಾಮದ ಸ.ನಂ. 1192ರಲ್ಲಿನ 49 ಎಕರೆ 36 ಗುಂಟೆ ಜಮೀನಿನ ಪೈಕಿ 10-00 ಎಕರೆ ಸಮತಟ್ಟಾದ ಗೋಮಾಳ ಜಮೀನನ್ನು ಹಾಗೂ 6 ಎಕರೆ 30 ಗುಂಟೆ ಕಲ್ಲು ಬಂಡೆಗಳಿಂದ ಕೂಡಿದ (10.00 ಎಕರೆ + 6.30 ಎಕರೆ) ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿಯಲ್ಲಿನ ಅವಕಾಶದಂತೆ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 21ರನ್ವಯ ಶೈಕ್ಷಣಿಕ ಮತ್ತು ಸಾಮಾಜಿಕ ಪುನರುತ್ಥಾನದ ಉದ್ದೇಶಕ್ಕಾಗಿ, ಸ್ವಾಮಿ ನಿರ್ಭಯಾನಂದ ಸರಸ್ವತಿ, ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ, ರಾಯಚೂರು ಇವರಿಗೆ ಈ ಜಮೀನನ್ನು ಮಂಜೂರು ಮಾಡುವುದರಿಂದ ಯಾವುದೇ ನ್ಯಾಯಾಲಯದ ಆದೇಶಗಳನ್ನು ಉಲ್ಲಂಘನೆ ಮಾಡಿದಂತಾಗುವುದಿಲ್ಲವೆಂಬ ಷರತ್ತಿನೊಂದಿಗೆ ಮಂಜೂರು ಮಾಡಲಾಗಿತ್ತು.

ಮುಂದುವರೆದು ಸದರಿ ಜಮೀನಿಗೆ ವಿಧಿಸಬೇಕಾಗಿರುವ ದರವನ್ನು ಪ್ರತ್ಯೇಕವಾಗಿ ಸೂಚಿಸಲಾಗುವುದು ತರುವಾಯ ಈ ಆದೇಶ ಚಾಲ್ತಿಗೆ ಬರತಕ್ಕದ್ದು ಎಂದು ತಿಳಿಸಲಾಗಿತ್ತು.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಪ್ರಸ್ತಾಪಿತ ಜಮೀನಿನ ಮಾರ್ಗಸೂಚಿ ಬೆಲೆಯ ಶೇ.50ರಷ್ಟನ್ನು ವಿಧಿಸಿ ರಾಯಚೂರು ಜಿಲ್ಲೆ, ರಾಯಚೂರು ತಾಲ್ಲೂಕಿನಲ್ಲಿ ಈ ಹಿಂದೆ ಮಂಜೂರು ಮಾಡಿದ್ದ 16.30 ಎಕರೆ ಜಮೀನನ್ನು ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ(ರಿ), ರಾಯಚೂರು ಇವರಿಗೆ ಮಂಜೂರು ಮಾಡಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 17 ಎಲ್‌ಜಿಆರ್ 2012 ಬೆಂಗಳೂರು, ದಿನಾಂಕ: 24-02-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆ, ರಾಯಚೂರು ಗ್ರಾಮದ ಸ.ನಂ. 1192ರಲ್ಲಿ ಕ್ಷೇತ್ರ 16.30 ಎಕರೆ ಜಮೀನನ್ನು ಮಾರ್ಗಸೂಚಿ ಬೆಲೆಯ ಶೇ.50ರಷ್ಟನ್ನು ವಿಧಿಸಿ ಶ್ರೀ ರಾಮಕೃಷ್ಣ ವಿವೇಕಾನಂದ ಆಶ್ರಮ(ರಿ), ರಾಯಚೂರು ಇವರಿಗೆ ಮಂಜೂರು ಮಾಡಿ ಆದೇಶಿಸಿದೆ.

ಉಳಿದಂತೆ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 17 ಎಲ್‌ಜಿಆರ್ 2012, ದಿನಾಂಕ: 22-12-2012ರಲ್ಲಿ ವಿಧಿಸಲಾದ ಷರತ್ತುಗಳು ಮುಂದುವರೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಮಹಾಂತೇಗೌಡ ಎಸ್.ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ(ಭೂ ಮಂಜೂರಾತಿ-3)

PR-206
SC-25

## ಸಹಕಾರ ಸಚಿವಾಲಯ

**ವಿಷಯ :** ಪಿಕಾರ್ಡ್ ಬ್ಯಾಂಕುಗಳು, ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ವ್ಯವಸಾಯ ಸೇವಾ ಸಹಕಾರ ಸಂಘಗಳಿಗೆ ಹೊಸ ಕಟ್ಟಡ ನಿರ್ಮಾಣ ಮತ್ತು ಹಳೆಯ ಕಟ್ಟಡಗಳ ದುರಸ್ಥಿಗಾಗಿ ರೂ.700.00 ಲಕ್ಷಗಳ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 09-12-2013.

2. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 03-01-2014.

3. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 09-06-2014, 16-08-2014 ಮತ್ತು 10-10-2014.

4. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಸಇ 212 ಸಿಎಲ್‌ಎಸ್ 2013, ದಿನಾಂಕ: 12-01-2015.

5. ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ: 09-03-2015.

**ಪ್ರಸ್ತಾವನೆ:-**

2013-14ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿದಂತೆ ಹೊಸ ಯೋಜನೆಯಾದ ಪಿಕಾರ್ಡ್ ಬ್ಯಾಂಕುಗಳು, ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘಗಳು ಮತ್ತು ವ್ಯವಸಾಯ ಸೇವಾ ಸಹಕಾರ ಸಂಘಗಳ ಹೊಸ ಕಟ್ಟಡ ನಿರ್ಮಾಣ ಮತ್ತು ಹಳೆಯ ಕಟ್ಟಡಗಳ ದುರಸ್ಥಿಗಾಗಿ ರೂ.10.00 ಕೋಟಿಗಳ ಆರ್ಥಿಕ ನೆರವು ಒದಗಿಸಲು ಘೋಷಣೆ ಮಾಡಲಾಗಿತ್ತು.

ಮೇಲೆ ಓದಲಾದ (1) ರ ಆದೇಶದಲ್ಲಿ ರೂ.300.00 ಲಕ್ಷಗಳ ಆರ್ಥಿಕ ನೆರವನ್ನು 2013-14ನೇ ಸಾಲಿನ ಪೂರಕ ಆಯವ್ಯಯದಲ್ಲಿ ಒದಗಿಸಲಾಗುವುದೆಂದು, ಕೆಲವು ಷರತ್ತುಗಳನ್ನು ವಿಧಿಸಿ ಆಡಳಿತಾತ್ಮಕ ಮಂಜೂರಾತಿ ನೀಡಿ ಆದೇಶ ಹೊರಡಿಸಲಾಗಿತ್ತು. ಆರ್ಥಿಕ ಇಲಾಖೆ 2013-14ನೇ ಸಾಲಿನ ಮೊದಲನೇ ಪೂರಕ ಅಂದಾಜಿನಲ್ಲಿ ರೂ.300.00 ಲಕ್ಷಗಳನ್ನು ಒದಗಿಸಿರುತ್ತದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ರೂ.300.00 ಲಕ್ಷಗಳನ್ನು 24 ಸಹಕಾರ ಸಂಘಗಳಿಗೆ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ (3)ರ ಆದೇಶದಲ್ಲಿ 2014–15ನೇ ಸಾಲಿನಲ್ಲಿ ಪೂರಕ ಆಯವ್ಯಯದಲ್ಲಿ ರೂ.700.00 ಲಕ್ಷ ಅನುದಾನವನ್ನು 74 ಸಹಕಾರ ಸಂಘಗಳ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ದುರಸ್ತಿ ಕಾಮಗಾರಿಗಳಿಗಾಗಿ ಆಡಳಿತಾತ್ಮಕ ಅನುಮೋದನೆ ನೀಡಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ (4)ರ ಆದೇಶದಲ್ಲಿ ಆರ್ಥಿಕ ಇಲಾಖೆಯು ಸೂಚಿಸಿರುವಂತೆ ಬಿಡುಗಡೆ ಮಾಡಲಾಗಿದ್ದ ರೂ.700.00ಲಕ್ಷಗಳ ಮೊದಲನೇ ಕಂತಾಗಿ ಶೇಕಡಾ 25ರಷ್ಟು ಅಂದರೆ ರೂ.175.00 ಲಕ್ಷಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯ ಆದೇಶದಂತೆ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (5)ರ ಆದೇಶದಲ್ಲಿ ಆರ್ಥಿಕ ಇಲಾಖೆಯು 2ನೇ ಪೂರಕ ಅಂದಾಜಿನಲ್ಲಿ ಹೊಸ ಕಟ್ಟಡ ನಿರ್ಮಾಣ ಮತ್ತು ಹಳೆಯ ಕಟ್ಟಡಗಳ ದುರಸ್ಥಿಗಾಗಿ ರೂ.700.00ಲಕ್ಷಗಳನ್ನು ಒದಗಿಸಿದ್ದು ಈ ಪೈಕಿ ರೂ.350.00ಲಕ್ಷಗಳನ್ನು ಬಿಡುಗಡೆ ಮಾಡಿ 96 ಸಹಕಾರಿ ಸಂಸ್ಥೆಗಳಿಗೆ ಹಂಚಿಕೆ ಮಾಡಲು ಆಡಳಿತಾತ್ಮಕ ಆದೇಶ ಹೊರಡಿಸಲಾಗಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ಬೆಂಗಳೂರು, ದಿನಾಂಕ: 09–03–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2014–15ನೇ ಸಾಲಿನ ಎರಡನೇ ಪೂರ ಅಂದಾಜಿನಲ್ಲಿ ರೂ.700.00 ಲಕ್ಷಗಳನ್ನು ಒದಗಿಸಿದ್ದು ಈ ಪೈಕಿ ರೂ.350.00 ಲಕ್ಷಗಳನ್ನು ಆರ್ಥಿಕ ಇಲಾಖೆ ಬಿಡುಗಡೆ ಮಾಡಿದ್ದು ಈ ಮೊತ್ತವನ್ನು ಅನುಬಂಧದಲ್ಲಿ ಲಗತ್ತಿಸಿರುವ 96 ಸಹಕಾರ ಸಂಸ್ಥೆಗಳಿಗೆ, ಅನುಬಂಧದ ಕಲಂ 5ರಲ್ಲಿ ಸೂಚಿಸಿರುವಂತೆ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ದುರಸ್ಥಿ ಕಾಮಗಾರಿಗಳಿಗಾಗಿ ರೂ.350.00 ಲಕ್ಷಗಳ (ಮೂರು ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಹಂಚಿ ಲೆಕ್ಕ ಶೀರ್ಷಿಕೆ 2425–00–108–0–70–100 (ಯೋಜನೆ) ಧನ ಸಹಾಯ/ಪರಿಹಾರದಡಿಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ದಿನಾಂಕ: 09–12–2013ರಲ್ಲಿ ಹೊಸ ಕಟ್ಟಡ ನಿರ್ಮಾಣ, ವಿಸ್ತರಣೆ ಹಾಗೂ ಹಳೆ ಕಟ್ಟಡಗಳ ದುರಸ್ಥಿಗಾಗಿ ವಿಧಿಸಿರುವ ಎಲ್ಲಾ ಷರತ್ತಿಗಳಿಗೊಳಪಟ್ಟು, ಬಿಡುಗಡೆ ಮಾಡಲಾಗಿದೆ. ಈ ಷರತ್ತುಗಳು ಉಲ್ಲಂಘನೆಯಾಗದಂತೆ ಸಹಕಾರ ಸಂಘಗಳ ಉಪನಿಬಂಧಕರು ವೈಯಕ್ತಿಕ ಮೇಲ್ವಿಚಾರಣೆಯನ್ನು ನಿಯತಕಾಲಿಕವಾಗಿ ನಡೆಸತಕ್ಕದ್ದು. ಅಂತೆಯೇ ಸಹಕಾರ ಸಂಘಗಳ ಜಂಟಿ ನಿಬಂಧಕರು ಕೂಡ ಈ ಬಗ್ಗೆ ತಪಾಸಣೆ / ಮೇಲ್ವಿಚಾರಣೆ ನಡೆಸತಕ್ಕದ್ದು. ಈ ದಿಸೆಯಲ್ಲಿ ಆದ ಪ್ರಗತಿಯನ್ನು ಕಾಮಗಾರಿ ಪ್ರಾರಂಭವಾದ ಮೂರು ತಿಂಗಳಿಗೊಮ್ಮೆ ಮರು ಸಲ್ಲಿಸತಕ್ಕದ್ದು.

ಮುಂದುವರೆದು, ಅನುಬಂಧದಲ್ಲಿ ಲಗತ್ತಿಸಿರುವ ಸಹಕಾರ ಸಂಘಗಳು ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013, ದಿನಾಂಕ: 09–12–2013ರಲ್ಲಿ ವಿಧಿಸಿದ ಷರತ್ತುಗಳನ್ನು ಪೂರೈಸದ ಸಹಕಾರ ಸಂಘದ ಬದಲಾಗಿ ಬೇರೆ ಸಹಕಾರ ಸಂಘವನ್ನು ನಿಬಂಧಕರು ಆಯ್ಕೆ ಮಾಡಿ ಸರ್ಕಾರದ ಅನುಮೋದನೆಯನ್ನು ಪಡೆಯುವ ಷರತ್ತಿಗೊಳಪಟ್ಟು ಕ್ರಮ ಕೈಗೊಳ್ಳಲು ಅನುಮೋದಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 73 ವೆಚ್ಚ–2/2015, ದಿನಾಂಕ: 07–03–2015 ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್ಎಸ್ 2013**
**(ಅನುಬಂಧ 96 ಸಹಕಾರ ಸಂಘಗಳು)**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | | ಅಂದಾಜು ಮೊತ್ತ | ಬಿಡುಗಡೆ ಮಾಡಬೇಕಾಗಿರುವ ಮೊತ್ತ |
|---|---|---|---|---|
| 1 | 2 | 3 | 4 | 5 |
| 1 | ಪಿಎಲ್‌ಡಿ ಬ್ಯಾಂಕ್, ತಾವರೆಕೆರೆ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 2 | ಪಿಎಲ್‌ಡಿ ಬ್ಯಾಂಕ್, ಮಂಟೂರ ಹುಬ್ಬಳ್ಳಿ | ಕಟ್ಟಡ ದುರಸ್ಥಿ | 06.00 | 3.00 |
| 3 | ಪಿಎಲ್‌ಡಿ ಬ್ಯಾಂಕ್, ಕುಸುಗಲ್ ಹುಬ್ಬಳ್ಳಿ | ಕಟ್ಟಡ ದುರಸ್ಥಿ | 06.00 | 3.00 |
| 4 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೃಷ್ಣಪುರ, ಹುಬ್ಬಳ್ಳಿ | ಕಟ್ಟಡ ನಿರ್ಮಾಣ | 10.00 | 5.00 |
| 5 | ಕೃಷಿ ಪತ್ತಿನ ಸಹಕಾರ ಬ್ಯಾಂಕ್, ಶಿರೂರ, ಬಾಗಲಕೋಟೆ | ಕಟ್ಟಡ ನಿರ್ಮಾಣ | 10.00 | 5.00 |
| 6 | ಕೃಷಿ ಪತ್ತಿನ ಸಹಕಾರ ಬ್ಯಾಂಕ್, ತಿಮ್ಮಾಪುರ, ಬಾಗಲಕೋಟೆ | ಕಟ್ಟಡ ನಿರ್ಮಾಣ | 10.00 | 5.00 |

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | | ಅಂದಾಜು ಮೊತ್ತ | ಬಿಡುಗಡೆ ಮಾಡಬೇಕಾಗಿರುವ ಮೊತ್ತ |
|---|---|---|---|---|
| 7 | ಕೃಷಿ ಪತ್ತಿನ ಸಹಕಾರ ಸಂಘ, ಚಿನ್ನಿಕಟ್ಟಿ, ಬ್ಯಾಡಗಿ ತಾ: | ಕಟ್ಟಡ ನಿರ್ಮಾಣ | 05.00 | 2.50 |
| 8 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನರೇಗಲ್ಲ, ಬ್ಯಾಡಗಿ ಕ್ಷೇತ್ರ | ಕಟ್ಟಡ ನಿರ್ಮಾಣ | 05.00 | 2.50 |
| 9 | ಕೃಷಿ ಪತ್ತಿನ ಸಹಕಾರ ಸಂಘ, ಅರಳೇಶ್ವರ, ಹಾನಗಲ್ ತಾ: ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 10 | ಕೃಷಿ ಪತ್ತಿನ ಸಹಕಾರ ಸಂಘ, ಮೋಟೆಬೆನ್ನೂರು, ಬ್ಯಾಡಗಿ ಕ್ಷೇತ್ರ, ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 11 | ಕೃಷಿ ಪತ್ತಿನ ಸಹಕಾರ ಸಂಘ, ಯಲಗಚ್ಛ, ಹಾವೇರಿ | ಕಟ್ಟಡ ದುರಸ್ಥಿ | 02.00 | 1.00 |
| 12 | ಕೃಷಿ ಪತ್ತಿನ ಸಹಕಾರ ಸಂಘ, ನೆಗಳೂರು, ಹಾವೇರಿ | ಕಟ್ಟಡ ದುರಸ್ಥಿ | 02.00 | 1.00 |
| 13 | ಕೃಷಿ ಪತ್ತಿನ ಸಹಕಾರ ಸಂಘ, ಕಲ್ಲಿಹಾಳ ಹಾವೇರಿ | ಕಟ್ಟಡ ದುರಸ್ಥಿ | 02.00 | 1.00 |
| 14 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹುಣಸಗಿ, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 15 | ಟಿಎಪಿಸಿಎಂಎಸ್, ಹುಣಸೂರು, ಮೈಸೂರು ಜಿಲ್ಲೆ | ಕಟ್ಟಡ ದುರಸ್ಥಿ | 10.00 | 5.00 |
| 16 | ಆರ್‌ಎಸ್‌ಎಸ್‌ಎನ್, ಗಾವಡಗೆರೆ, ಹುಣಸೂರು ತಾ: | ಕಟ್ಟಡ ನಿರ್ಮಾಣ | 10.00 | 5.00 |
| 17 | ವಿಎಸ್‌ಎಸ್‌ಎನ್ ರತ್ನಪುರ, ಹುಣಸೂರು ತಾ: | ಕಟ್ಟಡ ನಿರ್ಮಾಣ | 05.00 | 2.50 |
| 18 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗರಗೇಶ್ವರಿ, ಟಿ.ನರಸೀಪುರ ತಾಲ್ಲೂಕು, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 15.00 | 7.50 |
| 19 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬೆಟ್ಟದಪುರ, ಪಿರಿಯಾಪಟ್ಟಣ, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 20 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೆಡಿಯಾಲ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 21 | ವಿಎಸ್‌ಎಸ್‌ಎನ್, ಸಾಲಿಗ್ರಾಮ, ಕೆ.ಆರ್.ನಗರ ತಾಲ್ಲೂಕು | ಕಟ್ಟಡ ದುರಸ್ಥಿ | 05.00 | 2.50 |
| 22 | ವಿಎಸ್‌ಎಸ್‌ಎನ್ ಹೊಸೂರು, ಚುಂಚನಕಟ್ಟೆ ಹೋಬಳಿ, ಕೆ.ಆರ್.ನಗರ | ಕಟ್ಟಡ ದುರಸ್ಥಿ | 05.00 | 2.50 |
| 23 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬೆಟ್ಟದತುಂಗ, ಪಿರಿಯಾಪಟ್ಟಣ ತಾ: | ಕಟ್ಟಡ ನಿರ್ಮಾಣ | 10.00 | 5.00 |
| 24 | ಪಿಎಲ್‌ಡಿ ಬ್ಯಾಂಕ್, ಹೆಚ್.ಡಿ.ಕೋಟೆ | ಕಟ್ಟಡ ನಿರ್ಮಾಣ | 10.00 | 5.00 |
| 25 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಶೆಟ್ಟಿಹಳ್ಳಿ, ಗುಂಡ್ಲುಪೇಟೆ ತಾಲ್ಲೂಕು | ಕಟ್ಟಡ ನಿರ್ಮಾಣ | 08.00 | 4.00 |

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | | ಅಂದಾಜು ಮೊತ್ತ | ಬಿಡುಗಡೆ ಮಾಡಬೇಕಾಗಿರುವ ಮೊತ್ತ |
|---|---|---|---|---|
| 26 | ಕಸಬಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಗುಂಡ್ಲುಪೇಟೆ ಟೌನ್ | ಕಟ್ಟಡ ನಿರ್ಮಾಣ | 10.00 | 5.00 |
| 27 | ಪಿಎಲ್‌ಡಿ ಬ್ಯಾಂಕ್, ಗುಂಡ್ಲುಪೇಟೆ ತಾ: | ಕಟ್ಟಡ ನಿರ್ಮಾಣ | 10.00 | 5.00 |
| 28 | ಟಿಎಪಿಸಿಎಂಎಸ್, ಚಿಕ್ಕಮಗಳೂರು | ಗೋದಾಮು ನಿರ್ಮಾಣ | 10.00 | 5.00 |
| 29 | ಟಿಎಪಿಸಿಎಂಎಸ್, ಸಕಲೇಶಪುರ, ಹಾಸನ ಜಿಲ್ಲೆ. | ರೈತ ಭವನ ನಿರ್ಮಾಣ | 10.00 | 5.00 |
| 30 | ಕೃಷಿ ಪತ್ತಿನ ಸಹಕಾರ ಸಂಘ, ಉಳುವಾಗಿಲು, ಚಿಕ್ಕಮಗಳೂರು ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 5.00 |
| 31 | ಕೃಷಿ ಪತ್ತಿನ ಸಹಕಾರ ಸಂಘ, ಕಡವಂತೆ, ಶೃಂಗೇರಿ ತಾ: ಚಿಕ್ಕಮಗಳೂರು ಜಿಲ್ಲೆ | ಕಟ್ಟಡ ನಿರ್ಮಾಣ | 06.00 | 3.00 |
| 32 | ಮಲ್ಲಿಪಟ್ಟಣ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಲ್ಲಿಪಟ್ಟಣ, ಅರಕಲಗೂಡು ತಾ., ಹಾಸನ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 33 | ದೊಡ್ಡಕೋಡಿಹಳ್ಳಿ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಳೇಬೀಡು ಹೋಬಳಿ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 34 | ಕೃಷಿ ಪತ್ತಿನ ಸಹಕಾರ ಸಂಘ, ಕುಡ್ಲೂರು, ತರೀಕೆರೆ ತಾ: ಚಿಕ್ಕಮಗಳೂರು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 35 | ಕಾಫೀ ಕೋ-ಆಪರೇಟಿವ್ ಸೊಸೈಟಿ, ಅರೇಹಳ್ಳಿ ಗ್ರಾಮ, ಬೇಲೂರು ತಾ: | ಕಟ್ಟಡ ನಿರ್ಮಾಣ | 08.00 | 4.00 |
| 36 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹರಿಯಬ್ಬೆ, ಹಿರಿಯೂರು ತಾಲ್ಲೂಕು | ಕಟ್ಟಡ ದುರಸ್ಥಿ | 05.00 | 2.50 |
| 37 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೂವಿನಹೊಳೆ, ಹಿರಿಯೂರು ತಾಲ್ಲೂಕು | ಕಟ್ಟಡ ದುರಸ್ಥಿ | 05.00 | 2.50 |
| 38 | ವಿಎಸ್‌ಎಸ್‌ಎನ್, ಕಡಬನಕಟ್ಟೆ, ಚಳ್ಳಕೆರೆ ತಾ: ಚಿತ್ರದುರ್ಗ ಜಿಲ್ಲೆ, | ಕಟ್ಟಡ ದುರಸ್ಥಿ | 05.00 | 2.50 |
| 39 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಡಿ.ಕೊತ್ತಪಲ್ಲಿ, ಬಾಗೇಪಲ್ಲಿ ತಾ., ಕೋಲಾರ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 40 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೆಸ್ತೂರು, ಮದ್ದೂರು ತಾ., | ಕಟ್ಟಡ ದುರಸ್ಥಿ | 10.00 | 5.00 |
| 41 | ಕೃಷಿ ಪತ್ತಿನ ಸಹಕಾರ ಸಂಘ, ಅರಕೆರೆ, ಶ್ರೀರಂಗಪಟ್ಟಣ ತಾ., | ಕಟ್ಟಡ ನಿರ್ಮಾಣ | 10.00 | 5.00 |
| 42 | ಕೃಷಿ ಪತ್ತಿನ ಸಹಕಾರ ಸಂಘ, ಶೆಟ್ಟಹಳ್ಳಿ, ಮಳವಳ್ಳಿ ತಾ., ಮಂಡ್ಯ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 43 | ಕೃಷಿ ಪತ್ತಿನ ಸಹಕಾರ ಸಂಘ, ಕೌಡ್ಲೆ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ | ಮುಂದುವರಿದ ಕಾಮಗಾರಿ | 05.00 | 2.50 |
| 44 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಬೆಸೂರು, ಸೋಮವಾರ ಪೇಟೆ ತಾ., ಕೊಡಗು ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 45 | ಹುನಗುಂದ ತಾ., ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕ್ | ಕಟ್ಟಡ ದುರಸ್ಥಿ | 10.00 | 5.00 |

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | | ಅಂದಾಜು ಮೊತ್ತ | ಬಿಡುಗಡೆ ಮಾಡಬೇಕಾಗಿರುವ ಮೊತ್ತ |
|---|---|---|---|---|
| 46 | ಕೃಷಿ ಪತ್ತಿನ ಸಹಕಾರ ಸಂಘ, ದನ್ನೂರು, ಹುನಗುಂದ ತಾಲ್ಲೂಕು | ಕಟ್ಟಡ ನಿರ್ಮಾಣ | 08.00 | 4.00 |
| 47 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕಾರಿಗನೂರು ಚನ್ನಗಿರಿ ತಾ:, | ಕಟ್ಟಡ ನಿರ್ಮಾಣ | 10.00 | 5.00 |
| 48 | ಜೈ ಹನುಮಾನ್ ಕೃಷಿ ಪತ್ತಿನ ಸಹಕಾರ ಸಂಘ, ನಿಡುಗುಂದಿ, ಕುಡಚಿ ತಾ., | ಕಟ್ಟಡ ನಿರ್ಮಾಣ | 10.00 | 5.00 |
| 49 | ವ್ಯವಸಾಯ ಸೇವಾ ಸಹಕಾರ ಸಂಘ, ಸಾ:ಬನ್ನೂರ, ಬಿಕೆಪಿಎಸ್, ತಾ:ರಾಮದುರ್ಗ, ಬೆಳಗಾವಿ ಜಿಲ್ಲೆ | ಕಟ್ಟಡ ನಿರ್ಮಾಣ | 07.00 | 3.50 |
| 50 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸಾ:ಸುನ್ನಾಳ, ತಾ:ರಾಮದುರ್ಗ, ಬೆಳಗಾವಿ ಜಿಲ್ಲೆ | ಕಟ್ಟಡ ದುರಸ್ಥಿ/ ಕಾಂಪೌಂಡ್ ನಿರ್ಮಾಣ | 07.00 | 3.50 |
| 51 | ಕೃಷಿ ಪತ್ತಿನ ಸಹಕಾರ ಸಂಘ,ಹದನಾಳ ನಿಪ್ಪಾಣಿ ಮತ ಕ್ಷೇತ್ರ, ಬೆಳಗಾವಿ | ಕಟ್ಟಡ ದುರಸ್ಥಿ | 06.00 | 3.00 |
| 52 | ಶ್ರೀ ಜೈಹನುಮಾನ್ ಕೃಷಿ ಪತ್ತಿನ ಸಹಕಾರ ಸಂಘ, ಹದನಾಳ ನಿಪ್ಪಾಣಿ ಮತ ಕ್ಷೇತ್ರ, ಬೆಳಗಾಂ, | ಕಟ್ಟಡ ದುರಸ್ಥಿ | 05.00 | 2.50 |
| 53 | ಕೃಷಿ ಪತ್ತಿನ ಸಹಕಾರ ಸಂಘ, ಕೆರೆಹಳ್ಳಿ, ಚಾಮರಾಜನಗರ ತಾ: & ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 54 | ಪಿಎಲ್‌ಡಿ ಬ್ಯಾಂಕ್, ಶ್ರೀನಿವಾಸಪುರ, ಕೋಲಾರ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 55 | ಟಿಎಪಿಸಿಎಂಎಸ್, ಮುಂಡರಗಿ, ಗದಗ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 56 | ಕೃಷಿ ಪತ್ತಿನ ಸಹಕಾರ ಸಂಘ, ಅಂತೂರು, ಗದಗ ತಾ: | ಕಟ್ಟಡ ನಿರ್ಮಾಣ | 10.00 | 5.00 |
| 57 | ಕೃಷಿ ಪತ್ತಿನ ಸಹಕಾರ ಸಂಘ, ಕಣವಿ, ಗದಗ ತಾ | ಕಟ್ಟಡ ನಿರ್ಮಾಣ | 10.00 | 5.00 |
| 58 | ಕೃಷಿ ಪತ್ತಿನ ಸಹಕಾರ ಸಂಘ, ನೀಲಗುಂದ, ಗದಗ | ಮೂಲ ಸೌಕರ್ಯ | 05.00 | 2.50 |
| 59 | ಟಿಎಪಿಸಿಎಂಎಸ್, ಕುಷ್ಟಗಿ, ಕೊಪ್ಪಳ ಜಿಲ್ಲೆ | ಕಟ್ಟಡ ನಿರ್ಮಾಣ | 10.00 | 5.00 |
| 60 | ವಿಎಸ್‌ಎಸ್‌ಎನ್, ತಾವರಗೇರಾ, ಕುಷ್ಟಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 61 | ಕೃಷಿ ಪತ್ತಿನ ಸಹಕಾರ ಸಂಘ, ಜಾವೂರು, ನವಲಗುಂದ, ದಾರವಾಡ ಜಿಲ್ಲೆ | ಕಟ್ಟಡ ದುರಸ್ಥಿ | 15.00 | 7.50 |
| 62 | ಕೃಷಿ ಪತ್ತಿನ ಸಹಕಾರ ಸಂಘ, ಬ್ಯಾಹಟ್ಟಿ, ಹುಬ್ಬಳ್ಳಿ | ಕಟ್ಟಡ ದುರಸ್ಥಿ | 07.00 | 3.50 |
| 63 | ಹುಬ್ಬಳ್ಳಿ ತಾ: ಗೋಕುಲ ಅಗಡಿ ಗ್ರಾಮದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, | ಕಟ್ಟಡ ದುರಸ್ಥಿ | 05.00 | 2.50 |
| 64 | ಹಾವೇರಿ ಜಿಲ್ಲಾ ಕೋ ಅಪ್ ಕಂಜುಮರ್ಸ್ ಹೋಲ್‌ಸೇಲ್ ಸ್ಟೋರ್ ನಿ., ಹಿರೇಕೆರೂರು | ಉಗ್ರಾಣ ನಿರ್ಮಾಣ | 07.00 | 3.50 |
| 65 | ತಾಲ್ಲೂಕು ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ಅಫಜಲಪುರ | ಕಟ್ಟಡ ದುರಸ್ಥಿ | 10.00 | 5.00 |
| 66 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಲೆಯೂರು, ಚಾಮರಾಜನಗರ ತಾ: & ಜಿಲ್ಲೆ, ಅರಳಿಕಟ್ಟೆ ಗ್ರಾಮ | ಗೋಡಾನ್ ದುರಸ್ಥಿ | 02.00 | 1.00 |

| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | | ಅಂದಾಜು ಮೊತ್ತ | ಬಿಡುಗಡೆ ಮಾಡಬೇಕಾಗಿರುವ ಮೊತ್ತ |
|---|---|---|---|---|
| 67 | ಟಿಎಪಿಸಿಎಂಎಸ್ ರಥಬೀದಿ, ಸುಳ್ಯ | ಗೋದಾಮು ನಿರ್ಮಾಣ | 10.00 | 5.00 |
| 68 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ಇಡಗುಂದಿ, ಯಲ್ಲಾಪುರ ತಾ: | ಕಟ್ಟಡ ನಿರ್ಮಾಣ | 10.00 | 5.00 |
| 69 | ಕೃಷಿ ಪತ್ತಿನ ಸಹಕಾರ ಸಂಘ, ಹಂಗರಗಿ, ಬಾದಾಮಿ ತಾ., | ಕಟ್ಟಡ ನಿರ್ಮಾಣ | 10.00 | 5.00 |
| 70 | ವಿಎಸ್ಎಸ್ಎನ್, ಬೆನ್ನಾಯಕನಹಳ್ಳಿ, ತಿಪಟೂರು ತಾ: | ಕಟ್ಟಡ ದುರಸ್ಥಿ | 05.00 | 2.50 |
| 71 | ವಿಎಸ್ಎಸ್ಎನ್, ವೆಂಕಟಾಪುರ, ಚಿಂಚೋಳಿ, ಗುಲ್ಬರ್ಗಾ ಜಿಲ್ಲೆ | ಕಟ್ಟಡ ನಿರ್ಮಾಣ | 05.00 | 2.50 |
| 72 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಸೂರ, ಹಿರೇಕೆರೂರು, | ಕಟ್ಟಡ ನಿರ್ಮಾಣ | 05.00 | 2.50 |
| 73 | ಕೃಷಿ ಪತ್ತಿನ ಸಹಕಾರ ಸಂಘ, ಶೇರವಾಡ, ಹುಬ್ಬಳ್ಳಿ | ಕಟ್ಟಡ ಮತ್ತು ಗೋದಾಮು ದುರಸ್ಥಿ | 07.00 | 3.50 |
| 74 | ಶ್ರೀ ಹನುಮಾನ್ ಕೃಷಿ ಪತ್ತಿನ ಸಹಕಾರ ಸಂಘ, ಶಿರಾಂವ್‌ವಾಡಿ, ಚಿಕ್ಕೋಡಿ ತಾ., | ಕಟ್ಟಡ ನಿರ್ಮಾಣ | 03.00 | 1.50 |
| 75 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ವಾಳಕ್ಕಿ, ಚಿಕ್ಕೋಡಿ ತಾ., ಬೆಳಗಾಂ ಜಿಲ್ಲೆ | ಗೋದಾಮು ನಿರ್ಮಾಣ | 03.00 | 1.50 |
| 76 | ಜೈಕಿಸಾನ್ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇಂಗಳಿ, ಚಿಕ್ಕೋಡಿ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 03.00 | 1.50 |
| 77 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನವಿಲಹಾಳ, ಚಿಕ್ಕೋಡಿ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 03.00 | 1.50 |
| 78 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಧುಳಗನವಾಡಿ, ಚಿಕ್ಕೋಡಿ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 03.00 | 1.50 |
| 79 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ದೊಡ್ಡಮರಳವಾಡಿ, ಕನಕಪುರ ತಾ. | ಕಟ್ಟಡ ಮತ್ತು ಗೋದಾಮು ಕಟ್ಟಡ ನಿರ್ಮಾಣ | 02.00 | 1.00 |
| 80 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕೈನಡು ಹೊಸದುರ್ಗ ತಾ. | ಕಟ್ಟಡ ನಿರ್ಮಾಣ | 05.00 | 2.50 |
| 81 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಚಿಕ್ಕಬ್ಯಾಲದಕೆರೆ, ಹೊಸದುರ್ಗ ತಾ. | ಕಟ್ಟಡ ನಿರ್ಮಾಣ | 05.00 | 2.50 |
| 82 | ಕೃಷಿ ಪತ್ತಿನ ಸಹಕಾರ ಸಂಘ, ತಾಳಕೇರಿ, ಯಲಬುರ್ಗಾ | ಕಟ್ಟಡ ನಿರ್ಮಾಣ | 12.00 | 6.00 |
| 83 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಶಿರಮಾಪುರ, ಹಾವೇರಿ ತಾ: ಹಾವೇರಿ ಜಿಲ್ಲೆ | ಕಟ್ಟಡ ದುರಸ್ಥಿ | 04.00 | 2.00 |
| 84 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಲಗಾರನಹಳ್ಳಿ, ಮದ್ದೂರು ತಾ: | ಕಟ್ಟಡ ದುರಸ್ಥಿ | 08.00 | 4.00 |
| 85 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹೊಸಗಾವಿ ನಾಗಮಂಗಲ ವಿಧಾನಸಭಾ ಕ್ಷೇತ್ರ | ಕಟ್ಟಡ ನಿರ್ಮಾಣ | 10.00 | 5.00 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ. ಸಂ. | ಸಹಕಾರ ಸಂಸ್ಥೆಯ ಹೆಸರು | | ಅಂದಾಜು ಮೊತ್ತ | ಬಿಡುಗಡೆ ಮಾಡಬೇಕಾಗಿರುವ ಮೊತ್ತ |
|---|---|---|---|---|
| 86 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಲ್ಲೇಗೆರೆ, ಮಂಡ್ಯ ತಾಲ್ಲೂಕು & ಜಿಲ್ಲೆ | ಕಟ್ಟಡ ನವೀಕರಣ | 05.00 | 2.50 |
| 87 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಂಬಿನಾಯ್ಕನಹಳ್ಳಿ, ಮದ್ದೂರು ತಾ: | ಕಟ್ಟಡ ದುರಸ್ಥಿ | 04.00 | 2.00 |
| 88 | ಕೃಷಿ ಪತ್ತಿನ ಸಹಕಾರ ಸಂಘ, ಚಿಪ್ಪಲಕಟ್ಟಿ, ರಾಮದುರ್ಗ ತಾ., ಬೆಳಗಾಂ ಜಿಲ್ಲೆ | ಕಟ್ಟಡ ದುರಸ್ಥಿ | 05.00 | 2.50 |
| 89 | ಟಿಎಪಿಸಿಎಂಎಸ್, ಮೂಡಿಗೆರೆ ಚಿಕ್ಕಮಗಳೂರು ತಾ: | ಕಟ್ಟಡ ನಿರ್ಮಾಣ | 12.00 | 6.00 |
| 90 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹುನಗುಂದ, ಮುಂಡಗೋಡ ತಾಲ್ಲೂಕು | ಕಟ್ಟಡ ನಿರ್ಮಾಣ | 10.00 | 5.00 |
| 91 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸೊಲ್ಲಾಪುರ, ತರಿಕೆರೆ ತಾ: | ಕಟ್ಟಡ ದುರಸ್ಥಿ | 07.00 | 3.50 |
| 92 | ಪಿಎಲ್‌ಡಿ ಬ್ಯಾಂಕ್, ಮುದ್ದೇಬಿಹಾಳ, | ಕಟ್ಟಡ ನಿರ್ಮಾಣ | 08.00 | 4.00 |
| 93 | ವ್ಯವಸಾಯ ಸೇವಾ ಸಹಕಾರ ಸಂಘ ನಿ., ಬೂದಿಗೆರೆ, ದೇವನಹಳ್ಳಿ ತಾ: ಬೆಂಗಳೂರು ಗ್ರಾಮಾಂತರ | ಕಟ್ಟಡ ನಿರ್ಮಾಣ | 07.00 | 3.50 |
| 94 | ಕೃಷಿ ಪತ್ತಿನ ಸಹಕಾರ ಸಂಘ, ಉಳ್ಳಾರ್ತಿ, ಚಳ್ಳಕೆರೆ ತಾ., ಚಿತ್ರದುರ್ಗ ಜಿಲ್ಲೆ | ಕಟ್ಟಡ ದುರಸ್ಥಿ | 05.00 | 2.50 |
| 95 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹಿರೇಕಾಟಿ, ಗುಂಡ್ಲುಪೇಟೆ ತಾ: | ಕಟ್ಟಡ ನಿರ್ಮಾಣ | 07.00 | 3.50 |
| 96 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸಾಗಡೆ, ಚಾಮರಾಜನಗರ ತಾ: | ಕಟ್ಟಡ ನಿರ್ಮಾಣ | 08.00 | 4.00 |
| | **ಒಟ್ಟು ಮೊತ್ತ** | | **700.00** | **350.00** |

**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR-254**
**SC-100**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.